ಸಂ : ಬಿ.ಎಸ್. ಸಣ್ಣಯ್ಯ

# ನೀತಿಸಾರೋದಯ*

(ಕರ್ನಾಟಕ ಸುಭಾಷಿತ ಸಂಗ್ರಹ)

ನೆಟ್ಟನೆ ವೀರಂ ವೈರಿಘ
ರಟ್ಟಂ ಭುಜಬಲ ಲಲಾಮ ಭೀಮನ ಕೈಗಂ
ಸಟ್ಟುಗ ಬಂದುದು ಶಿವಶಿವ
ಕಟ್ಟಿದುದಂ ಕಳೆಯಬಹುದೆ [1]ಸುಕವಿ ಕರ್ಣಾ[ಭರಣಾ][1] ೧೯೪

ಅರಿವು ನಿಜಂ ಸಹದೇವಂ
[2]ನಿರವಧಿ[2] ಮಾರಾಂಪರಿಲ್ಲವರ್ಜುನನೊಳ್ ಮ
ತ್ತರಿವವನಂ ತುಱುಂಗಾಯಿಸಿ
ತಿರಿ[3]ದ[3]ವನಂ ಹೇಡಿ ಮಾಡಿದುದು ವಿಧಿವಶದಿಂ ೧೯೫

ನೆಟ್ಟನೆ ಮೂಱುಂ ಜಗದೊಳ್
ಕಟ್ಟರಸೆನಿಸಿರ್ದ ಸುರಪತನುಜಂ ರಿಪುಕುಲ
ದಿಟ್ಟನೆನಿಪ್ಪರ್ಜುನಗಂ
ತೊಟ್ಟುದು ಬಳೆಯುಟ್ಟು ನಿರಿಗಳುಂ ವಿಧಿವಶದಿಂ ೧೯೬

ಬೇಡರ ಭಯದೊಳ್ ಹರಿಣಂ
ಕಾಡೊಳಗಿರಲಂಜಿ ಪೋಗಿ ಶಶಿಯುಂ ಸಾರಲ್
ಕೂಡಿರ್ದ ರಾಹು ನುಂಗಲ್
ಕೇಡಡಸಿದೊಡೆಲ್ಲಿ ಪೊಕ್ಕಡಂ ಮಾಣ್ದಪುದೇ ೧೯೭

(ನೀತಿಗ್ರಂಥ ಪು. ೪೨)

---

1 .... (ಕ) 2 ನಿರಿವಡೆ (ಗ) 3 ವ (ಗ)

* ೬೬–೪ ಸಂಚಿಕೆಯಿಂದ ಮುಂದುವರಿದಿದೆ.

ಹುಲಿಗಂಜಿ ಹುತ್ತವೇರಲ್
ಬಿಲದೊಳಗಣ ಹಾವು ಕಡಿದುದಂ ಕೇಳ್ದಱಿಯಾ
ಬಲವಂತನಾಗಿ ದೈವದ
ಬಲವಿಲ್ಲದವಂಗೆ ಕೇಡು ತಪ್ಪ[1]ದೆ ಬಕ್ಕಂ[1] ೧೯೮
(ನೀತಿಗ್ರಂಥ ಪು. ೪೨)

ಕೆಟ್ಟದಱೊಳ್ ಪರಿಣಾಮತೆ
ಕೊಟ್ಟದಱೊಳ್ ಮಱವೆ ಸಿರಿಯೊಳಸ್ಥಿರಭಾವಂ
ಬಿಟ್ಟದಱೊಳ್ ಪೇಯತ್ವಂ
ಪುಟ್ಟಿಗೊಡವಱಿತವೇನು ಸುಜ[ನ]ಮನೋಜಾ ೧೯೯

ಅಳಲುಂ ನೋವುಂ ಕೇಡುಂ
ಘಳಿಲನೆ ತನಗಡಸಿದಲ್ಲಿ ಅಱಿವಿನ ಮಱವೊ
ಕ್ಕಳಿದನೆ ಚದುರಂ ಮತ್ತಾ
ತಿಳಿವಿನ್ನಾವೆಡೆಗೆ ಸುಕವಿ [ಕರ್ಣಾಟಭರಣಾ] ೨೦೦

ನೆಟ್ಟನೆ ಸತಿ ಸುತರರ್ಥಂ
ಕೆಟ್ಟೆಡೆಯೊಳ್ ಶೋಕವ್ಯಾಧಿ ತನ್ನಯ ಮನಮಂ
ಮುಟ್ಟಿದ ಪದದೊಳ್ ಸೈರಣೆ[2]
ಪುಟ್ಟಿದೊ[2][ಡೇತಱ ವಿವೇಕ ಕರ್ಣಾಭರಣಾ][2] ೨೦೧
(ನೀತಿಗ್ರಂಥ ಪು. ೪೩)

ಹಿಂದಂ ನೆನೆಯದನೇ ಸುಖಿ
ಮುಂದಂ ನೆನೆವವನೆ ದುಃಖಿಯಿಂತೆರಡಱೊಳಂ
ಬಂದುದನನುಭವಿಪನೆ ಬುಧ
ಯೆಂದುಂ ಸಾಯದವನೆ ದೇವ [3][ಸುಜನಮನೋಜಾ][3] ೨೦೨
(ನೀತಿಗ್ರಂಥ ಪು. ೪೩)

ಚಿಂತಿಪನೆ ನರಕಿ ಸಲೆ ನಿ
ಶ್ಚಿಂತನೆ ಸುಖಿ ಕೋಪಮುಳ್ಳೊಡಾತನೆ ದ್ರೋಹಂ
ಸಂತೋಷಿಯೆ ಸಿರಿವಂತಂ
ಭ್ರಾಂತಳಿದನೆ ಪರಮಯೋಗಿ [3][ಸುಜನಮನೋಜಾ][3] ೨೦೩

ಕುತ್ಸದ ಮೊತ್ತಂ ಪಾಪದ
ಬಿತ್ತು ಪರಾಭವದ ಬೆಳಸು ಪಸಿದ ಕೃತಾಂತಂ

---

1 ದಮೋಘಂ (ಗ) 2 ಡವನರಿತವೇನು .... (ಕ) ಡೇತರ ವಿವೇಕ ಕರ್ಣಾಭರಣಾ (ಗ) 3 .... (ಕಗ)

ಗೆತ್ತಿದ ಬೋನಂ ತನುವಿದ
ನಿತ್ಯಂ ತಾನೆಂದು ತಿಳಿಗೆ ಬುಧಜನರೊಲವಿಂ ೨೦೪

ನವರಂಧ್ರವೆಂಬ ಕನ್ನಂ
ಸವೆದಿರಲೊಡಲೆಂಬ ಮನೆಯನೊಯ್ಯನೆ ಪೊಕ್ಕಾ
ಜವನೆಂಬ ಕನ್ನಗಳ್ಳಂ
ತವಕದೊಳಸುವೆಂಬ ಧನವನೊಯ್ಯನೆ ಮಾಣಂ ೨೦೫
(ನೀತಿಗ್ರಂಥ. ಪು. ೪೩)

ಯಮುನಾರ ನಂಟ ತನ್ನಯ
ಸಮಸುತನೆನಿಸಿರ್ದ ಧರ್ಮರಾಜನನೊಯ್ಯನೆ
ಭ್ರಮೆ ಬೇಡ ಬೇಡ ಮಾನವ
ನಿಮಿಷದಿ ಧರ್ಮವನೆ ಮಾಡು [1][ಸುಜನ ಮನೋಜಾ][1] ೨೦೬
(ನೀತಿಗ್ರಂಥ. ಪು. ೪೪)

ಆವಂಗಮಾದೊಡಂ ಮ
ತ್ತಾವುದುಮಂ ಕಳಿವುಪಾಯಮುಂಟೇ ಜಗದೊಳ್
ದೇವರ್ಗಂ ದೈತ್ಯರ್ಗಂ
ಸಾವಂ ತಪ್ಪಿಸುವುಪಾಯಮಾವುದುಮುಂಟೇ ೨೦೭
(ಅರ್ಥನೀ ೭–೬೮)

ಸಾವಿನ ಬೋಧೆಗೆ ಸಿಲುಕಿದ
ನಾವಂ ದಿಕ್ಪಾಲರಾಳುಗೆಲಸಂ ಭೋಗಿ[2][ಪ][2]
ರಾವಣನನೊಯ್ದನೆನೆ ಮನು
ಜಾವಳಿಗಂಜುವನೆ ಯಮನು ಕೇಳ್ ಗುಣರತ್ನಾ ೨೦೮

ಆಳುಂ ಪೆಂಡಿರು ಸುತರುಂ
ಮೇಳದವರ್ ನಂಟರಿಷ್ಟರೊಡಹುಟ್ಟಿದರುಂ
ಕಾಲಾಳ್ ಗಜ ರಥವಶ್ವಂ
ಕೇಳಳಿವವೆ ಜವನ ಮುಳಿಸ [3][ಕೇಳ್ ಗುಣರತ್ನಾ][3] ೨೦೯
(ನೀತಿಗ್ರಂಥ. ಪು. ೪೪)

ತಾವುಳಿದು ತಮ್ಮ ನಂಟರ್
ಸಾವರೆ ಶೋಕಿಪ್ಪುದವರ ಬೆಂಬಳಿವಿಡಿದುಂ
ತಾವುಂ ಸಾವರ್ ದುಃಖಿದ
ಬೇವಸದಿಂ ಬೇಯಲೇಕೆ [3][ಕೇಳ್ ಗುಣರತ್ನಾ][3] ೨೧೦
(ನೀತಿಗ್ರಂಥ. ಪು. ೪೪)

---

1 .... (ಕ ಗ)    2 ಸುವ (ಕ)    3 .... (ಕ ಗ)

ಯತಿಗಳ್ ಸಿದ್ಧರ್ ವಿದ್ಯಾ
ವ್ರತಿಗಳ್ ದೈವಜ್ಞರಾಗಮಜ್ಞರ್ ಧಾತ್ರೀ
ಪತಿಗಳ್ ಮಂತ್ರಜ್ಞರ್ ವಿಧಿ
ಗತಿಯಂ ನಿಜಸತ್ವದಿಂದ ಗೆಲಿದವರೊಳರೇ ೨೧

ಜಾತಸ್ಯ ಮರಣ ತಪ್ಪದು
ಏತಕೆ ಚಿಂತಿಸುವೆ ಬಱದೆ ಹಣೆಯಲಿ ಬರೆದಿರೆ
ತಾ ತಿಳಿಸಬೇಡ ಮಾನವ
ಭೀತಿಯ ಬಿಡು ಹರಣಪಡೆಗೆ [1][ಸುಜನ ಮನೋಜಾ][1] ೨೧
(ನೀತಿಗ್ರಂಥ ಪು. ೪೪)

ಕಲಿ ಸತ್ತು ಪಂದೆ ಬದುಕಂ
ಕಲಿ ಬದುಕಿಯೆ ಪಂದೆ ಸಾಯನಿದು ಸಿದ್ಧಾಂತಂ
ಕಲಿಯುಂ ಪಂದೆಯು ಸಾಯ್ಗುಂ
ಕಲಿಯಾಗಿಯೆ ಸಾಯ್ಗೆ ಸಾವ ಕಾಲಕ್ಕೆಂದುಂ ೨೧

ಕಾದಿಗೆಯ್ದುಯ್ದು ಬಂದೊಡೆ
ಮೇದಿನಿಪತಿ ತನ್ನ ಸಮಮನಾಗಳೆ ಮಾಳ್ಪಂ
ಮೊದಲಿಸಿ ರಣದೊಳಳಿದರೆ
ಮಾದೇವನ ಹೊರೆಗೆ ದೇವಗಣಿಕೆಯರೊಯ್ವರ್ ೨೧

ಚೋಣಿಯೊಳಿಟ್ಟಾಡಿದಡಂ
ಕೋಣೆಯೊಳಡಗಿರ್ದಡಂ ಲಲಾಟದ ಲಿಖಿತಂ
ಮಾಣದಿದನಱಿದು ಜಾಣಂ
ಹೋಣಿಸಿ ಕಾದು[ವು]ಮು ರಣದಿ [ಸುಜನ ಮನೋಜಾ] ೨೧

ಪೆಂಡಿರ್ ತೊಲಗಿದ ಪೊಲೆ ಭೂ
ಮಂಡಲದೊಳ್ ನಾಲ್ಕು ದಿವಸ ಭೀತಿಗೆ ರಣದೊಳ್
ಗಂಡರ್ ತೊಲಗಿದ ಪೊಲೆ ಭೂ
ಮಂಡಲ ಚಂದ್ರಾರ್ಕ ತಾರೆಯುಳ್ಳನ್ನಬರಂ ೨೧

ನೆಲದಲಪಕೀರ್ತಿವಡೆಗುಂ
ಲಲನೆಯರಿದಿರೆದ್ದು ಬೈವರಿಪ್ಪತ್ತೊಂದುಂ

1 .... (ಕ ಗ)

ತಲೆಯ ಪಿತೃಗಳಿಗೆ ನರಕಂ
ಕಲಿ ಧುರದೊಳ್ ಪಿಂದಕೊಂದು ಪಜ್ಜೆಯ ತೆಗೆಯಲ್ ೨೧೭

ಇದ್ದೊಳ್ಳಿತು ಬದ್ದೊಳ್ಳಿತು
ಬಿದ್ದೊಳ್ಳಿತು ಭದ್ರಗಜ[ನು] ಸೂಕರ ಶುನಕಂ
ಇದ್ದೇವುದೊ ಬದ್ದೇವುದೊ
ಬಿದ್ದೇವುದೊ ಧಾತ್ರಿಯಲ್ಲಿ [ಸುಜನಮನೋಜಾ] ೨೧೮

ಸತಿ ಬಲ್ಲಳ್ ಪತಿಸುಖಮಂ
ಶತಖಂಡದ ಘಾಯ ಸುಖವ ಪಟುಭಟ ಬಲ್ಲಂ
ಗತಿಯ ಶಿವಭಕ್ತ ಬಲ್ಲಂ
ಸತತಂ ಕೇಳ್ ಜಾರೆ ಪಿಡಿಭವಿಯಱಿದಪನೇ (?) ೨೧೯

ಹಾಡಿಂಗೋದಿಂಗಱಿಯದ
ಪೀಡೆಗಳಂ ಬೇಡಿ ಬೇಡಿ ಬೆಳಗಪ್ಪುದಱಿಂ
ಬೇಡುವುದು ಕೊಡುವನಂ ಕೊಂ
ಡಾಡುವನಂ ಕೂಡೆ ಸುಕವಿ [ಕರ್ಣಾಭರಣಾ] ೨೨೦

ಬಳ್ಳಿ ಮೊದಲಾಗಿ ಮೊದಲೊಳೆ
ಗೆಳ್ಳನಿತುಂ ಪೊನ್ನನಿಕ್ಕಿದೊಡೆ ಪರ್ಬದು ಪೊ
ನ್ನಳ್ಳ ನರನಿತ್ತೊಡಲ್ಲದೆ
ಬೆಳ್ಳನೆ ಪರ್ಬುಗುಮೆ ಕೀರ್ತಿಲತೆ ದಿಕ್ತಟಮಂ ೨೨೧

(ಲೀಲಾ ೧-೪೩)

ಪುಟ್ಟುವ ಪದದೊಳ್ ಬಾರದು
ನೆಟ್ಟನೆ ತಾನಂತ್ಯದಲ್ಲಿ ಬಾರದು ಧನಮುಂ
ನಟ್ಟನಡು ವ್ಯಥೆಯ ಮಾಳ್ಪುದು
ಕಟ್ಟದೆ ಸತ್ಪಾತ್ರಕಿತ್ತು ಭೋಗಿಪುದುಚಿತಂ ೨೨೨

ಅಂದಂದಿಗೆ ಕಱಿವುದಱಿಂ
ದೊಂ[ದೆ] ದಿನಂ ಕಱೆವೆನೆಂದು ಪಲವು ದಿನಂ[ಗಳ್]
ನಿಂದ ಬಳಿಕ್ಕದ ಕಱೆದೊಡೆ
ಪಿಂದಣ ಹಾಲೇಕೆ ಬಹುದು [ಸುಜನ ಮನೋಜಾ] ೨೨೩

ಸಾಲದೆ ಸೋಲದೆ ಪೊ[1]ಡೆ[1]ಮ
ಟ್ಟೋಲೈಸದೆ [2]ನಿ[2]ಚ್ಚ ಪಯಣ[3]ಮಿ[3]ಲ್ಲದೆ ತಾನಿ
ರ್ದಾಲಯದೊ[4]ಳಿರ್ದು ಬಾಳ್ವುದೆ[4]
ಭೂಲೋಕಮನಾಳ್ವ[5]ಸುಖ[5]ದಿನಗ್ಗಳಮಲ್ತೇ

(ಪಂಚತಂ ೧೦೭-೫೩)

ಮದಂಮೆ ಪಗೆ ಕೆಳೆತನಂ ಕೃತಿ
ಪ್ರದುಗರ್ಭಂ ಜೂಜು ಕಳೆವು ಪರವಧು ಸಾಲಂ
ಮೊದಲೊಳ್ ಸವಿ ನಿರ್ವಹಿಸುವ
ಪದದೊ[6][ಳ್ ದು][6]ರ್ಘಟ ಸರಸ್ವತೀಮಣಿಹಾರಂ

ರೋಗಿಯ ದಾವಂ ಋಣಿ ಸುಖಿ
ದಾಗರನಾವಂ ಜಿತೇಂದ್ರಿಯಂ ಗುರುಪದಸಂ
ಯೋಗಿಯದಾವಂ ಭಕ್ತ್ಯಾ
ದ್ಯೋಗದೊಳೊಡದಿರ್ಪವಂ ............... (?)

ಮೋಹಮದಾವುದು ಧನದ ಸ
ಮೂಹಂ ಭ್ರಮೆಯಂಧಕಾರವಾವುದು ಯುವತಿ
ಯ್ವಾಹಂಗತಿಮತಿಯೊವುದು
ಸೋಹಂಭಾವಂ ವಿವೇಕ [ಕರ್ಣಾಭರಣಾ]

ಹಳಿವಾವುದು ಕುಲಭಂಗಂ
ತಿಳಿವಾವುದು ಸಮತೆ ಬಂಧವಾವುದು ಮೋಹಂ
ಕಳವಾವುದನ್ಯತವೆಡಜಿಂ
ಮಳಿನಾವುದಂ ಧೃತಿ ವಿವೇಕ [ಕರ್ಣಾಭರಣಾ]

ಭೂಷಣವಾವುದಂ ಘನ ಸಂ
ತೋಷಂ ಅತಿಸ್ನೇಹವಾವುದರಿದರೊಳಿಹ ಸಂ
ಭಾಷಣೆ ಮತಿಯಾವುದಂ ಪರ
ದೂಷಣಮಂನಂಳಿವುದೆ ವಿವೇಕ [ಕರ್ಣಾಭರಣಾ]

---

1 ರ (ಕ) 2 ನಿಚ್ಚನಿ (ಕ) 3 ಮಯಿಮಿ (ಕ) 4 ಳ್ ಬಾಳ್ವದೆ (ಕ)
5 ಸೊಗ (ಕ) 6 ದ್ದು (ಕ)

ಕಣ್ಣೊಳಗಣ ಕರಿಯಾಲಿಯು
ಸಣ್ಣಹನೆಂದೆನಲುಬೇಡ ಜಗಮಂ ಕಾಣ್ಬುದಾ
ತನ್ನೊಳ್ ವಿವೇಕಮುಳ್ಳೊಡೆ
ಬಿನ್ನಣಮಂ ಮೆಱೆಯಲೇಕೆ [ಸುಜನಮನೋಜಾ] ೨೩೦

ಕತ್ತಲೆಯನು ಒತ್ತರಿಸುವ
ದೀಪ್ತಿಯು ನೆರೆ ಕಿಱಿಯದೆಂಬರೇ ಕಿರಿಟಱಿಯೆಂಗ
ತ್ಯುತ್ತಮ ಗುಣವಿರಲವನುಂ
ಮುತ್ತಯ್ಯಗೆ ಹಿರಿಯನೆನಿಪ [ಸುಜನಮನೋಜಾ] ೨೩೧

ಕರಕಿಱಿಯನಾದೊಡಾಗಲಿ
ಪುರುಷನಂ ವಿದ್ಯಾಬುದ್ಧಿ ಸ್ಮೈರಣೆಯುಳ್ಳಡೆ
ಹಿರಿಯುತನಕೆರಡು ಕೊಡೆ (?)
ಮರದುದ್ದಿನ ಮನುಜನೇಕೆ [ಸುಜನಮನೋಜಾ] ೨೩೨

ಕಸ್ತುರಿಮಿಗ ಬಡವಾದರೆ
ಮತ್ತದು ತಾಂ ಪೊಲಸು ನಾರಲರಿಯದು ಸಹಜಂ
ಉತ್ತಮ ನಿರ್ಗತಿಯಾದೊಡೆ
ಮತ್ತಮಿಾಕೆಯ ಪೆರವನಲ್ಲದವಗುಣವಱಿಯಂ ೨೩೩

ವ್ಯತಿಗಾರ್ಪಂತಭಿಮಾನ
ಚ್ಯುತಿಗಾರ್ಪರೆ ಮಾನ್ಯರುತ್ತಮರ್ ರಣದೊಳ್ ದು
ರ್ಗತಿಗಳ್ಕಿ ಬೆರಸಿ ಶಸ್ತ್ರದ
ಹತಿಗಳ್ಕದೆ ಸಾಯ್ಗುಮದಱಿನಿವು ಕೂರಿದಮಂ ೨೩೪

ಎಲ್ಲಾ ಕಲೆಗಳ ಬಲ್ಲವ
ರಲ್ಲಿಯು ಸಿರಿಯಕ್ಕನಿಕ್ಕು ಸಿರಿ ತಾ ಮೂರ್ಖನ
[1]ನ[ಲ್ಲಾ][1]ಳಾಗಿಹಳು ಕವಿಯೊ
ಳೊಳ್ಳಿದರಂಗೊಳ್ಳಿತುಂಟೆ [ಸುಜನಮನೋಜಾ] ೨೩೫

ಹೊನ್ನುಳ್ಳ ಹೊಲೆಯರಾದರು
ಮನ್ನಿಸುವರಿತ್ತ ಬನ್ನಿರಿ ಕುಳ್ಳಿರಿಯೆಂಬರು

---

ನಲ್ಲ (ಕ)

ತನ್ನೊಡಹುಟ್ಟಿದ ಬಡವನ
ನನ್ನಿಗನಿವರಾರುಮೆಂಬರೀ ಕಲಿಯುಗದೊಳ್ ೨೩೬

ನೆಲ ಮುನಿವುದು ನೀರೆರೆಯರು
ಕುಲವಜೀಯರು ಕೂಸ ಕುಡರು ತಳಿಗೆಯೆಲಿಕ್ಕರು
ಹೊಲೆಯರು ಬಟ್ಟೆಯ ತೊಲಗರು
ಎಲೆ ಮಾನವ ಭಾಗ್ಯಲಕ್ಷ್ಮಿ ತೊಲಗಿದ ಬಳಿಕಂ ೨೩೭

ಬಡವರ್ ಬಂದಡೆ ಬಂಧುಗ
ಳೊಡನುಡಿಯರ್ ಮುಂದೆ ನಿಂದಡಂ ಲಜ್ಜಿಸುವರ್
ಬಡತನವೆ ಶತ್ರು ಲಕ್ಷ್ಮಿಗೆ
ಗಡ ನಂಟಂ ಬೆರೆ ಬಂಧು ಶತ್ರುಗಳಂಟೇ ೨೩೮

ಅಡವಿಯ ನೆರೆಯುಡುಗದೆ ಸುಡು
ವಡೆಯೊಳ್ ಕಿಚ್ಚಿಂಗೆ ಗಾಳಿ ನೆರವಾದುದು ತಾಂ
ಕೆಡಿಸಿತು ದೀಪಮನಾಗಳ್
ಬಡವರ್ಗಂ ಬಂಧುವುಂಟೆ ವಸುಧಾತಳದೊಳ್ ೨೩೯

ಬಡತನವೆ ಕೇಳು ನಿನಗಾಂ
ಪೊಡಮಡುವೆಂ ನಿನ್ನ ದೂಸಱಿಂ ಸಿದ್ಧತ್ವಂ
ಪಡೆದೆನದೆಂತೆನೆ ಧರೆಯೊಳ್
ಗೆಡೆಯಾಡಿಯು ಕಾಣ್ಬೆನೆನ್ನನಾರುಂ ಕಾಣರ್ ೨೪೦

ಶ್ರೀಯಿಲ್ಲದವನ ರೂಪಂ
ತಾಯಿಲ್ಲದ ಸುತನು ಸತಿಯುಮಿಲ್ಲದ ನರನುಂ
ಪ್ರಾಯದೊಳಲ್ಲದ ಪಡಪ್ಪುಂ
ಮಾಯಾವಿಯ ತೆಱನಲ್ತೆ [ಸುಜನಮನೋಜಾ] ೨೪೧

ಹಣ ಹೋಗಿ ಬಾಳಲಕ್ಕು
ಹಣ ಹೋಗಿಯು ಬಾಳಲರಿದುಮೆಂತೆನೆ ಪೇಳ್ವೆಂ
ಹಣ ಹೋದರೆ ಹಣವಕ್ಕುಂ
ಹಣ ಹೋದರೆ ಹೇಣೆಯು[1]ಕ್ಕು [ಸುಜನಮನೋಜಾ][1] ೨೪೨
(ನೀತಿಗ್ರಂಥ ಪು. ೪೫)

1 ಕ್ಕು .... (ಕ ಗ)

ಅಱಿಯರೆನವೇಡ ತಮತಮ
ಗಱಿವಂತುಟು ಕಾರ್ಯಗತಿಯನೆಲ್ಲರ್ ಬಲ್ಲರ್
ಮೊಱದೊಳಗಣ ಕಿಱುಗೂಸುಂ
ಹೊಱಕೈಯಿಂದಲ್ಲದುಗುರೊಳೊರಸದು ಕಣ್ಣಂ ೨೪೩

ನಂಬದಿರನ್ಯರನೆಂದುಂ
ನಂಬುವಡಾರ್ಯದು ನಂಬು ನಂಬಿದ ಬಳಿಕಂ
ನಂಬುಗೆಗೆಡದಿರು ಕೆಟ್ಟರೆ
ನಂಬದಿರಾ ಜನ್ಮ ಜನ್ಮಾಂತರದೊಳ್ ೨೪೪

ಮುನಿದಂಗೆ ಮುನಿಯೆ ಭೂಸುರ
ಮುನಿಯದಱಿಳು ಮುನಿಯನತುಳ ಕ್ಷತ್ರಿಯನೆಂತುಂ
ವಿನಯಿತರೊಳ್ ಮುನಿ ವೈಶ್ಯಂ
ಅನವರತಂ ಮುನಿವ ಶೂದ್ರನವರಿವರೆನ್ನಂ ೨೪೫

ಒತ್ತರ ಕೆರ ಪೊಲ್ಲದ ಸತಿ
ಮುತ್ತಿಗೆಗೊಳಗಪ್ಪ ದುರ್ಗ ಅಧಮನ ಕೆಳೆಯುಂ
ಸತ್ತವರಿಂದತಿಕಷ್ಟಂ
ದುಷ್ಟನ ಸಾರುವುದೆ ಕಷ್ಟ [ಸುಜನಮನೋಜಾ] ೨೪೬

ಅರವೆಯಿಲ್ಲದ ಕೆಱೆಯುಂ
ನೀರಿಲ್ಲದ ಬಾವಿ ಚಂದ್ರನಿಲ್ಲದ ನಿಶೆಯುಂ
ಸಾರಕಲೆಯಿಲ್ಲದವಳಂ
ಸಾರದಿರಾ ಸೌಖ್ಯಮಿಲ್ಲ [ಸುಜನಮನೋಜಾ] ೨೪೭

ಖಳನ ಗುಣಗಣ ದಾವಾ
ನಳನಂ ಸುಜನಂತರಂಗ ಸಂತೋಷವ್ಯಾ
ಕುಳನಂ ಸಮಗ್ರ ದೋಷಾ
ಕುಳನಂ ಪೆಸರ್ಗೊಂಡು ಬದುಕುವಣ್ಣಂದಾವಂ ೨೪೮

ಬೇವಿನ ಸಸಿಯಂ ತಂದಿ
ಟ್ಟಾವಿನ ನೊರೆವಾಲನೆಱೆದು ಸಲಹಿದೊಡದು ತಾಂ
ಬೇವಲ್ಲದಮೃತವಾಗದು
ಗಾವಿಲರೊಡನಾಡಿ ಗುಣವನರಸಿದರುಂಟೇ ೨೪೯

ಪಡೆದಂ ರಜೋಧಿಕಂ ವಿಧಿ
ಪಡೆವಗೆಯುಂ ಫಣಿಯೆನಮೃತಕರನಂ ವಿಷಮಂ
ಕಡಲಂ ಸುಳಿಯುಂ ಮಳಿಯುಂ
ಸಿಡಿಲುಂ ಪಡೆದಂತೆ ಸುಜನರಂ ದುರ್ಜನರಂ

(ಪಂಪರಾ ೧-೩೨: ಮಲ್ಲಿಪು ೧-೩೨; ಸೂಕ್ತಿಸು ೧-೨೮)

ತುಱುಬಿಗೆ ಪನ್ನೀರೆಱೆದೊಡೆ
ಪಱಿಕೆಂಬುದ ಮಾಣ್ಬುದಿಲ್ಲ ದುರ್ಜನಗೆಂತುಂ
ಮಱೆದುಪಕಾರಂಗೆಯ್ಯಲ್
ಕಱುಬುತನಂ ಮಾಣ್ಬುದಿಲ್ಲ [ಸುಜನಮನೋಜಾ]

ಆರುಂ ದುರ್ಜನ ಜನಕುಪ
ಕಾರಂ ಮಾಡಿದೊಡೆ ಸುಣ್ಣಕಲ್ಗಳ ಬಿಸಿಯು ನಿ
ವಾರಿಪೆನೆಂದದಱೊಳ್ ತ
ಣ್ಣೀರಂ ಪೊಯ್ದಂತೆ ಸುಕವಿ [ಕರ್ಣಾಭರಣಾ]

ಕಿಚ್ಚಿನೊಳು ಬಿದ್ದ ಚೇಳಂ
ಬೆಚ್ಚರ[1][ದಿಂ][1] ತೆಗೆಯೆ ಕೈಯನೂಱುವ ತೆಱದಿಂ
ತುಚ್ಛಂಗೆ ಹಿತವ ಮಾಡಿದೊ
ಡಚ್ಚಿಗವಂ ಮಾಡದಿಹನೆ [ಸುಜನ ಮನೋಜಾ]

ಹಲ್ಲಿಲ್ಲದೆ ಬಸುಱೊಳಗಿ
ರ್ದಲ್ಲಿಯೆ ದುರ್ಜನನ ತಾಯಿ ಬದುಕಿದಳಲ್ಲದೆ
ಹಲ್ಲುಳ್ಳರೆ ಕರುಳೆಲ್ಲವ
ನೆಲ್ಲದೆ ಮಾಣ್ದಪನೆ ಸುಕವಿ ಕರ್ಣಾಭರಣಾ

ತುಡುಕಿದ ದೋಷಿಯನಲ್ಲದೆ
ಪಿಡಿಯದು ಘಟಸರ್ಪನಂತುಟಲ್ಲ[2]ದೆ[2] ಮತ್ತಾ
ತುಡುಕದ ನಿರ್ದೋಷಿಯುಮಂ
ಪಿಡಿವುದು [3]ಖಳಮುಖ ಘಟೋಗ್ರ[3] ಜಿಹ್ವಾಸರ್ಪಂ

(ಜಗವಿ ೧-೧೨ ; ಸೂಕ್ತಿಸು ೧-೩೩)

---

1 ದಿಂದಂ (ಕ) 2 ದು (ಕ) 3 ಘಟಮುಖಾಗ್ರ (ಕ)

ಮಾಡುವುದು ಗುಣಕೆ ಗುಣಮಂ
ಮಾಡದಿರಾ ದುರ್ಜನಂಗೆ ಗುಣಮೆಂಬುದ ನೀಂ
ಮಾಡಿದೆಯಾದೊಡೆ ಹಾವಿಂ
ಗೂಡಿದ ಹಾಲಂತೆ [ಸುಕವಿ ಕರ್ಣಾಭರಣಾ] ೨೫೬

ದುರ್ಜನಮುಖಕೋದಂಡಂ
ದುರ್ಜನಜಿಹ್ವಾಗ್ರ ಪಲವು ಸರಳಂಗಳಿಂದಂ
ದುರ್ಜಿಂಯೆಸೆಯುತ ಬರುತಿರೆ (?)
ಸಜ್ಜನಕ್ಷಮೆಯೆಂಬ ಕವಚಮಂ ತೊಟ್ಟಿರ್ದಂ ೨೫೭

ಚೇಳುಂ ವ್ಯಾಳಂ ಮಕ್ಷಿಕ
ತಾಳಿದವವು ಪುಚ್ಛ ದಂತ ಶಿರದಿಂ ವಿಷಮಂ
ತಾಳಿದ ವಿಷಮಂ ದುರ್ಜನ
ಕಾಲಿಂದಂ ಶಿರತನಕ್ಕು [ಸುಜನಮನೋಜಾ] ೨೫೮

ಎಲೆ ದುರ್ಜನ ಕಾನನದೊಳ್
ಸಲೆ ತಿರುಗುವೆಯೇತಕೆಂದು ಸಜ್ಜನ ಕೇಳಲ್
ಹುಲಿ ತನ್ನ ತಿಂದು ಮಿಕ್ಕರ
ಕೊಲುತಿರಬೇಕೆಂದು ತಿರುಗುವೆಂ ನಿಶ್ಚಯದಿಂ ೨೫೯

ಮಸಿ ಬಿಳಿದಹುದೇ ತೊಳೆದೊಡೆ
ವಿಷ ಬಿಡುವುದೆ ಹಾವಿಗೆಷ್ಟು ಹಾಲೂಡಿದೊಡಂ
ವಸುಧೆಯೊಳಂ ನಾಯಿಬಾಲ
ಸಸಿನಹುದೇ ಕಟ್ಟಿಬಿಡಲು [ಚೂಡಾರತ್ನಾ] ೨೬೦

ಪರಿಕಿಪೊಡೆ ಪಿಸುಣನಗ್ಗದ
ಹರನೊಳ್ ಪುರುಡಿಸುವನೆಂದದುಳಿದರ ಹವಣಿಂ
ಕೊರಳೊಳ್ ಬಿಸಮಂ ತಳೆದರೆ
ಗಿರಿಶಂ ತಾಂ ತಳೆದನಲ್ತೆ ತುದಿನಾಲಗೆಯೊಳ್ ೨೬೧
(ಲೀಲಾ ೧-೩೩)

ಕಿಚ್ಚಿಂದಂ ಚುಚ್ಚಿದ ಪುಣ್
ಮುಚ್ಚುಗು ಕೆಲವಾನಂ ದಿನಕೆ ನಾಲಗೆಯಿಂದಂ
ಚುಚ್ಚಿದ ಪುಣ್ ಜನ್ಮಾಂತರ
ಮುಚ್ಚುವುದೇ ಮನದೊಳಿರದೆ [ಚೂಡಾರತ್ನಾ] ೨೬೨

ತುಚ್ಛನ ಕೆಳೆ ಹಾವಿನ ಹುದು
ಮಚ್ಚರಿಸುವ ಸತಿಯ ಸಂಗ ದುರ್ಜನಗೋಟಿಂ
ಅಚ್ಚುಗವಿಲ್ಲದೆ ಮಾಣ್ಬುದೆ
ತುಚ್ಛರೊಡನಾಡಿ ಗುಣವನರಸಿದರುಂಟೇ ೨೬೩

ನಾಯಿ ಮೊದಲಾಗಿ ತನ್ನವ
ಗೋಯೆನ್ನದು ತನ್ನರನ್ಯರೆಂಬುದ ಬಲ್ಲದು
ನೋಯಂ ನುಡಿವ ಮನುಷ್ಯಂ
ನಾಯಿಂದಂ ಕಷ್ಟಮಲ್ತೆ [ಚೂಡಾರತ್ನಾ] ೨೬೪

ನುಡಿಯಲೊಡನಿದಿರ ಹೃದಯಂ
ಮಿಡುಮಿಡು ಮಿಡುಕುವರೆ ಬೇರೆ ಕಾಂತಮದೇಕೈ
ನುಡಿ ನಿಂದೆ ಶಕ್ಕುದಲ್ಲದು
ನುಡಿದರೆ ಇಹಪರಕೆ ಹಿತವ ನುಡಿವವ ಚದುರಂ ೨೬೫

ಈ ವರ್ತಪರಿಕಾಲದೊ (?)
ಆವಂ ದುರ್ಜನನವಂಗೆ ವಂದಿಪುದು ಜನಂ
ಪಾವಂ ನೋನುವರಲ್ಲದೆ
ಆವ ದಿನಂ ಪದ್ದ ನೋಂಪರೇ ಧಾರುಣಿಯೊಳ್ ೨೬೬

ದೊರೆಯ ಮುಳಿಸೆರಡು ಮಾಸಂ
ಕರಿಗಳ ಮುಳಿಸೇಳು ದಿವಸ ಬಳಿಕಿಲ್ಲೆಂತುಂ
ಹಿರಿಯರ ಮುಳಿಸಾಕ್ಷಣದೊಳ್
ತುರುಕನ ಮುಳಿಸೆಂದು ಬಿಡದು [ಚೂಡಾರತ್ನಾ] ೨೬೭

ಜಲಚರ ಜಲದೊಳಗಿರ್ದುಂ
ತೊಲಗದೆ ದುರ್ಗಂಧ ಮೆಯ್ಯ ಪತ್ತಿಹ ತೆಜದಿಂ
ಸುಲಲಿತ ಶ್ರುತವಾರ್ಧಿಯೊಳಂ
ಮುಳುಗಿರಲಜ್ಞಾನ ಗಂಧಮುಂ ಪೋದಪುದೇ ೨೬೮

ಮನಮಂ ದಂಡಿಸಲರಿಯದೆ
ತನುವಂ ದಂಡಿಸುವರೇಕೆ ತನ್ನಯ ಕೈಯೊಳ್
ತನು ಮುನ್ನ ಸಾಲಗೊಂಡುದೊ
ಮನವಂಜಿಯದ ಮೂರ್ಖ ತಪಮದೇಗೈದಪುದೋ ೨೬೯

ಹೆಣ್ಣಿಂಗಂ ಹೊನ್ನಿಂಗಂ
ಮಣ್ಣಿಂಗಂ ಕಾಂಕ್ಷೆಯಿಂದಮೆಱಗದೆ ಲೋಕಂ
ಬಣ್ಣಿಸೆ ಚಂಚಲನಾಗದೆ
ತಿಣ್ಣಂ [1][ನಡೆ][1]ವವನೆ ತಾಂ ತಪೋಧನನಕ್ಕುಂ ೨೭೦

*ನಿರುಪಮ ಗುಣಿಯೆನಿಸಿದ ಸ
ತ್ಪುರುಷರ ರೂಪೆಂತುಟಾದೊಡಾತನೆ ಯೋಗ್ಯಂ
ಪರಿಮಳವನೀವ ಚಂದನ
ಗೊರಡುಂ ಮುರುಡಾದೊಡೇನು [ಚೂಡಾರತ್ನಾ] ೨೭೧

ಕೋಪದೊಳೊದ[ಗು]ಗು ಮನಸಂ
ತಾಪಂ ಸತಿಸುತರಗಲ್ಕೆ ಜನನಂ ಮರಣಂ
ಕೂಪರ ಕೆಳೆ ತಪದಾನಂ
ಪೋಪವು ಬಱಿವಾತಿನಿಂದೆ [ಚೂಡಾರತ್ನಾ] ೨೭೨

ಆನೆ ತುಡುಗುಣಿಯುಮಾದೊಡೆ
ಭೂನಾಥಂ ಜಾರನಾದೊಡಂ ಶಾಸ್ತ್ರಜ್ಞಂ
ತಾನೆ ಕಡು ಮೂರ್ಖನಾದೊಡೆ
ಏನೆಂದೆನಬಹುದು ನೀತಿ ತಾಂ ಭೂತಳದೊಳ್ ೨೭೩

ಪರಧನಮುಂ ಪರಸತಿಯುಂ
ಪರರೊಬ್ಬರುಮಿಲ್ಲದಲ್ಲಿ ದೊರೆಕೊಂಡೆಡೆಯೊಳ್
ನಿರಪೇಕ್ಷಿತನೆನಿಸಿದವಂ
ಪರಶಿವನಂಶಿಕಮಿದೆಂದು ತಿಳಿವರ್ ವಿಬುಧರ್ ೨೭೪
(ನೀತಿಗ್ರಂಥ)

ಪತಿಯುಳಿದ ಸತಿಯರೆಡೆಗಂ
ಸತಿ ಪತಿ ಸಂಯೋಗದೆಡೆಗೆ ದುರ್ಜನರೆಡೆಗಂ
ಅತಿಬಳರ ವಿಷ[ಯ]ಸಂಧಿಗೆ
ಮತಿವಂತಂ ಪೋಗಲಾಗದೆಲೆ ಗುಣರತ್ನಾ ೨೭೫

---

1 ತಾಂ ನಡೆ (ಕ)
*೧೩೭ನೆಯ ಪದ್ಯವಾಗಿಯೂ ಬಂದಿದೆ.

ಜಾರೆಯೆಡೆ ಜಗಳದೆಡೆಗಂ
ಕ್ರೂರಮೃಗಂ ಕಷ್ಟರೆಡೆಗೆ ನಿಷ್ಠುರರೆಡೆಗಂ
ಜಾರ ಮುಸಿ ಪಿಸುಣರೆಡೆಗಂ
ರೋರಂತೆಡೆಯಾಡೆ ಕೇಡು ತಪ್ಪದೆ ಬಕ್ಕುಂ

ಪತಿಹಿತೆ ಸತಿ [1]ತೊರೆದನೆ[1]ಯತಿ
ಮತಿವಂತನೆ ಮಂತ್ರಿ[2][ಯಿಚ್ಚೈ]ಯಜೀ[2]ವನೆ ಚದುರಂ
ಪಿತೃ ಮಾತೃಭಕ್ತನೇ ಸುತ
ಸತತಂ ರಕ್ಷಿಪನೆ ತಂದೆ [3][ಚೂಡಾರತ್ನಾ][3]

(ನೀತಿಗ್ರಂಥ)

ರಕ್ಷಿಪನೆ ತಂದೆ ಹಸಿದರೆ
ಕುಕ್ಷಿಯು ತುಂಬುವಳೆ ತಾಯಿ ಕಡು ದುರ್ಜನರಂ
ಶಿಕ್ಷಿಪನೆ ನೃಪತಿ ಪುರುಷನ
ಪಕ್ಷದೊಳಿಪ್ಪವಳೆ ಸುದತಿ [ಚೂಡಾರತ್ನಾ]

ಫಲಮಂ ಪುಷ್ಪಮನಂಬುಮು
ನೆಲರಂ ವೀಳೆಯಮನೆಸೆವ ಕಲಸೋಗರಮಂ
ನಲಿದಿದಿರಲೀಯಲರಿಯದೆ
ಸಲೆ ಭುಂಜಿಪನೆಗ್ಗನೀಗೆ [ಚೂಡಾರತ್ನಾ]

ಆರವೆಯು ನೆಳಲು ಹಳ್ಳದ
ನೀರುಂ ಬೆಳುದಿಂಗಳುಂ ಪಥಾಶ್ರಮದೆಲರುಂ
ನಾರಿಯರು ಧರಣಿ ಧನವು ವಿ
ಚಾರಿಸೆಯೆಲ್ಲರೊಳಂ ಸಮವು [ಚೂಡಾರತ್ನಾ]

ಸಿರಿಯಿಂದಾದತಿಮದ ಮುಂ
ದರಿದ್ರದಿಂದಾದ ಕೇಡುಮಂ ತನ್ನಿಂದಂ
ಪರಿಹರಿಸಬಲ್ಲ ನೀತಿಗೆ
ಸರಿಯುಂಟೇ ನರರೊಳಗೆ[ಯು ಚೂಡಾರತ್ನಾ]

ಹಸಿದುಂಬುಂದೊಸೆದು ನೆಲೆವುದಂ
ಬೆಸಗೊಂಡಡೆ ಪೇಳ್ವುದುಚಿತಮಂತಲ್ಲದೆಯುಂ

1 ದೊರಕಿದನೆ (ಗ) 2 ಯೆಡೆಯರಿ (ಕ) ಯಿಚ್ಚೈಯನೀ(ಗ) 3 .... (ಕಗ)

ಪಸಿದುಣ್ಣದೊಸೆದು ನೆಲೆಯದೆ
ಬೆಸಗೊಳ್ಳದೆ ಪೇಳ್ವನೆಗ್ಗ [ಚೂಡಾರತ್ನಾ] ೨೮೨

ಬೆಸಸಿದೊಡಲಸದಳೀ ಸತಿ
ದೆಸೆಯುಳ್ಳನೆಯರಸು ಅಮೃತಹಸ್ತನೆ ವೈದ್ಯಂ
ಪೊಸ ಬಗೆಯುಳ್ಳನೆ ಕವಿ (?)
ಪೊಸದೀವನೆ ದಾನಿಯೆಡರಿಗಪ್ಪನೆ ನೆಂಟಂ ೨೮೩

ವಾಣಿಜ್ಯ[1][ವನತಿ][1] ಕೃಷಿಯಿಂ
ಪ್ರಾಣಮನೊಪ್ಪಿಸುವ ಸೇವೆಯಿಂ ಯಾತನೆಯಿಂ
ಮಾಣದೆ ಮಾಡಿಸುತಿಪ್ಪುದು
ಗೇಣುದ್ದಿನ ಹೊಟ್ಟೆಯೈಸೆ [ಚೂಡಾರತ್ನಾ] ೨೮೪
(ನೀತಿಗ್ರಂಥ ಪು. ೧೯)

ಕೊಡೆ ಕಂಚ ಗಿಂಡಿ ವಾಹನ
ಪಡಿಗಂ ಪಾದುಕೆ ಸಮಸ್ತ[2]ವಸ್ತ್ರಂ ಶಸ್ತ್ರಂ[2]
ವಡಿ ದಂಡಿಗೆ ಪಡೆವಂಗಳ
ಪಿಡಿದೊಡಲಿಗೆ [3]ದು[3]ಡಿದು ಭೃತ್ಯರಪ್ಪರ್ ಮನುಜರ್ ೨೮೫
(ನೀತಿಗ್ರಂಥ ಪು. ೧೯)

ಅಱಿಯದ ನೃಪನೋಲಗದೊಳ್
ಎಱಗುತ್ತಡಿಗಡಿಗೆ ಸತ್ತು ಹುಟ್ಟುವ ಬದುಕಂ
ತೊಱೆದು ಜೀವನಕೆ ಹುಲ್ಲಿಯ
ಹೊಱೆಯಂ ಹೊತ್ತಿಹುದು ಲೇಸು [ಚೂಡಾರತ್ನಾ] ೨೮೬

ಮಾಡಿದ ಸೇವೆಯನಱಿಯದ
ಮೂಢ ನೃಪಾಲಕನ ಸೇರಿ ಚಿಂತಿಸುವದಱಿಂ
ನಾಡೊಳು ಭಿಕ್ಷಾನ್ನವನುಂ
ಡಾಡುವುದತಿ ಲೇಸು [ಸುಕವಿ ಕರ್ಣಾಭರಣಾ] ೨೮೭

ಪರಗೃಹವಾಸವೆ ಕಷ್ಟಂ
ಸಿರಿಯುಳ್ಳರ ಮನೆಯ ಹಣ್ಣು ತಹುದತಿಕಷ್ಟಂ
ಪರಸೇವೆಯಧಿಕ ಕಷ್ಟಂ
ಧರೆಯೊಳು ಬಡತನವೆ ಕಷ್ಟ [ಚೂಡಾರತ್ನಾ] ೨೮೮

---

1 ಮು ನೆರೆ (ಕ) ವನತಿ (ಗ) 2 ಸ್ತ್ರಂ (ಕ) 3 ಹಿಸು (ಕ)

ಬಂಟಿಪ್ಪುದುಂ ತುಱುಗಾಯ್ವುದು
ತೋಂಟವ ಮಾಡುವುದು ಅಂತುಟಲ್ಲದೆ ಮತ್ತಾ
ಗೆಂಟಾಗಿ ಪೋಪುದಲ್ಲದೆ
ನೆಂಟರ ಸಾರವನೆಸೆಗ್ಗ [ಚೂಡಾರತ್ನಾ] ೨೮೯

ಜನನಿ ಗಡ ಜಿಹ್ವೆ ಕಂಗಳ್
ಜನಕಂ ಗಡ ಕರ್ಣ ಬಂಧುಮಿತ್ರಂ ನಾಸಿಕೆ
ತನಯು ಸತಿ ಹಸ್ತ ಪಾದಂ
ತನು ಧನ ಸಂಸಾರಮೆಂದು ತಿಳಿವುದು ಚದುರಂ ೨೯೦

ಆದರಣೆಯಿಲ್ಲದಲ್ಲಿಗೆ
ಪೋದಿಹೆ ತಾನೆಂದು ಕುದಿದು ಮಱುಗುವನೆಂಗಂ
ಬೂದಿಯೊಳು ಘೃತವನೆಱೆದುಂ
ಸ್ವಾದಿಸಲಿನಿದಹುದೆ [ಸುಕವಿ ಕರ್ಣಾಭರಣಾ] ೨೯೧

ಆದರಣೆಯಿಲ್ಲದೂಟಂ
ಸೋದರರಿಂದಾದ ಕಲಹ ಮುಗಿಲೊಡ್ಡಣಮುಂ
ಹಾದಿಗರೊಳಾದ ನೇಹಂ
ಪೋದುದು ತಮ್ಮಿಂದ ತಾವು [ಚೂಡಾರತ್ನಾ] ೨೯೨

ನಡೆವುದು ನಗೆಗೆಡೆಯಾಗದೆ
ನುಡಿವುದು ನಯ ನೀತಿಯಲ್ಲಿ ಸುಜನರೊಳೆಂತುಂ
ಬಿಡುವುದು ಕೆಡೆನುಡಿಯುವರಂ
ಜಡರೊಡನಾಡಲ್ಕೆ ಬೇಡ [ಚೂಡಾರತ್ನಾ] ೨೯೩

ಕಡುಮೂರ್ಖನೊಡನೆ ನುಡಿಯಂ
ನುಡಿವುದು ಮನದಿಚ್ಛೆಯಱಿದು ನುಡಿಯುವೊಡೆಂತುಂ
ಕಡುಕಷ್ಟ ದುಃಖಮಕ್ಕುಂ
ನುಡಿವುದು ಸಜ್ಜನರನಱಿದು ನುಡಿದಡೆ ಸಫಲಂ ೨೯೪

ಮಜ್ಜಿಗೆಯಿಲ್ಲದ ಊಟಂ
ಸಜ್ಜನ ಸತ್ಪಾತ್ರವಱಿತು ಕೊಡದ ಸಿರಿಯುಂ
ದುರ್ಜನರೊಡನೆ ಸಮೇಳಂ
ಹಜ್ಜೆಯು ಹರಕೊತ್ತಿದಂತೆ [ಚೂಡಾರತ್ನಾ] ೨೯೫

ಧರೆಯೆಲ್ಲ ದಾನಶೀಲರೆ
ಮರನೆಲ್ಲಂ ಕಲ್ಪತರುವೆ ಪಶುಗಳ್ ಸುರಭಿಯೆ
ಪರಿವಾರವೆಲ್ಲ ವೀರರೆ
ನರರೆಲ್ಲರು ಜಾಣರಿಹರೆ [ಕನ್ನಡ ಜಾಣಾ] ೨೯೬

ನುತ ಕವಿಗಳ್ ಪೇಳಿದ ಸ
ತ್ಕೃತಿಯೊಳಂ ರಸಿಕನಱಿವವೊಲ್ ಕವಿಯಱಿಯಂ
ರತಿಯೊಳ್ ಲಲನಾಸುಖಮಂ
ಪಿತನಱಿವನೆ ಪತಿಯ ತೆಱದಿ [1]ಕನ್ನಡಜಾಣಾ[1] ೨೯೭

ಒತ್ತೆಯು ಸೂಳೆಯರೊಲವಂ
ಮುತ್ತದ ಹೂವಿನೊಳಂ ಕಂಪನೊಲೆಯೊಳ್ ತಂಪಂ
ಪತ್ರಿಯೊಳು ರಸಮನಱಸುವು
ದೆತ್ತಣ ಸಾಹಿತ್ಯಪ್ಪೆಸೆ [ಕನ್ನಡ ಜಾಣಾ] ೨೯೮

ಕೊಡುವರೆಡೆಯಾಡಲೀಯದೆ
ಕೊಡುವುದು ಕೊಡದಿದರ್ೊಡಿಲ್ಲವೆಂಬುದು ಮತ್ತಾ
ಕೊಡುವನ ಬೇಡುವನೊಡಲುಂ
ಕೆಡುವನ್ನಕ ಹುಸಿದರುಂಟೆ [ಕನ್ನಡ ಜಾಣಾ] ೨೯೯

ಆಗಲಿ ಕೊಡು[2][ವಂ][2] ಚದುರಂ
ಬೇಗದೊಳಿಲ್ಲೆಂದು ಕಳುಹುವಾತನು ಚದುರಂ
ಆಗೀಗಲೆಂದು ಕಾಲವ
ನೀಗುವವ ತ್ಯಾಗಿಯೆಲ್ಲ ನರರೊಳಗಧಮಂ ೩೦೦

ಉರಗಂಗಂಜುವ ತೆಱದಿಂ
ಗರುಡಂಗಂಜುವರೆ ಭೂತಕಾಲಕೆತರ್ಗಂ
ಕರೆದೀವ ತೆಱದಿ ಸುರಸರ
ನಱದೀವರೆ ಧಾತ್ರಿಯಲ್ಲಿ [ಕನ್ನಡ ಜಾಣಾ] ೩೦೧

ಭಂಡರಿಗೆ ಭಾಷೆಹೀನಗೆ
ಲಂಡರಿಗಂ ಮಿಂಡಿ ಸಹಿತ ಬಂದಿರ್ದರಿಗಂ

1 .... (ಕ) 2 ವ (ಕ)

ಕಂಡಾಕ್ಷಣದೊಳ್ ಕೊಡುವರು
ಪಂಡಿತರೆನೆ ನೋಡರವರು [ಕನ್ನಡ ಜಾಣಾ] ೩೦೨

ಕಿನ್ನರಿಯ ಬಾಯ ಬೂತಿನ
ಕನ್ನೆಯರಿಗೆ ಸೂಳೆಯರ್ಗೆ ಕುಂಟಗೆಯರ್ಗಂ
ಉನ್ನತ ವಸ್ತುವನೀವರು
ಸನ್ಮತ ವಿದ್ಯಾಧಿಕರ್ಗೆ ಕೊಡುವವರುಂಟೇ ೩೦೩

*ಮದ್ದಳೆಯ ಗತಿಗೆ ಜಘನಗ
ಳೆದ್ದಾಡಲು ನಗುತ ಕಂಡು ಲಾಲಿಪರಲ್ಲದೆ
ಪದ್ಯ ಪದ ಕಾವ್ಯದರ್ಥವ
ದೊಡ್ಡಗರೇಂ ಬಲ್ಲರೇ ವಿದಗ್ಧಲಲಾಮಾ ೩೦೪

ಅಡಗಂ ತಿಂಬಗೆ ಭಂಗಿಯ
ಹುಡಿಯಂ ಮುಕ್ಕುವಗೆ ಕಳ್ಳ ಕುಡಿವಗೆ ಕರ್ಮಿಗೆ
ಕಡುನೀಚಗೆ ಕಾಳ್ಗಿಡವಗೆ
ಕೊಡುವಂತುಟು ಮಾನ್ಯತತಿಗೆ ಕೊಡುವವರುಂಟೇ ೩೦೫

ಕೂಟದಲಿ ಕಪಟ ಹೊಲ್ಲಂ
ಊಟದೊಳೆರಡಾಗಿ ಬಡಿಸುತಿಪ್ಪುದು ಹೊಲ್ಲಂ
ನಾಟಿಯುದಯದಲಿ ಹೊಲ್ಲಂ
ತೋಟಿಯ ಕನಸಿನಲಿ ಹೊಲ್ಲ [ಕನ್ನಡ ಜಾಣಾ] ೩೦೬

ಅರಗಿಳಿಯಿಲ್ಲದ ವನವುಂ
ಗುರುವಿಲ್ಲದ ಮಠವು ಹಿರಿಯರಿಲ್ಲದ ಮನೆಯುಂ
ಗುರುವಿಕೆಯಿಲ್ಲದ ಸತಿಯುಂ
ವರವಿಲ್ಲದ ದೈವವೇಕೆ [ಕನ್ನಡ ಜಾಣಾ] ೩೦೭

ಪರಮಪದದಲ್ಲಿ ನಂಬುಗೆ
ಯೆರಡುಳ್ಳೊಡೆಯೆರಡುಮುಂಟು ಜನನಂ ಮರಣಂ
ಪರಮಪದದಲ್ಲಿ ನಂಬುಗೆ
ಯೆರಡಿಲ್ಲದೊಳೆರಡುಮಿಲ್ಲ ಜನನಂ ಮರಣಂ ೩೦೮

---

*ಇದು ೯೯ನೆಯ ಪದ್ಯವಾಗಿಯೂ ಬಂದಿದೆ.

ದಾನದೊಳನ್ನವೆ ಸಾರಂ
ದಾನಂಗೊಡಲಿಲ್ಲವಂಗೆ ನಯ ನುಡಿಸಾರಂ
ಜ್ಞಾನಿಗೆ ಮೋಕ್ಷವೆ ಸಾರಂ
ಏನುಂ ಮಾತಱಿಯದಂಗೆ ಮೌನವೆ ಸಾರಂ ೩೦೯

ತಿರಿದುಂಬರೆ ಕರೆದುಂಬುದು
ತಿರಿಯದೆಯಟ್ಟುಂಬರಿಕ್ಕಿಯುಂಬುದು ಮತ್ತಾ
ಕರೆಯದೆಯಿಕ್ಕದೆಯುಂಡರೆ
ನರಕಿಯವಂ ಮನುಜರೊಳಗೆ [1]ಕನ್ನಡ ಜಾಣಾ[1] ೩೧೦
(ನೀತಿ ಗ್ರಂಥ ಪು. ೧೭)

ಕರೆಯದೆ ಬಂದುಂಬೂಟಂ
ಸುರತಕ್ಕನುಕೂಲೆಯಲ್ಲದವಳೊಡನಾಟಂ
ಪರವಧುಗೆಳ[2]ಸಿದ ನೋಟಂ[2]
ಧರೆಯೊಳ[ಗ]ಪಕೀರ್ತಿ ನಾರಿಯಲ್ಲಿಯ ಬೇಟಂ ೩೧೧
(ನೀತಿ ಗ್ರಂಥ ಪು. ೧೭)

ಉಂಬ ವೇಳೆಯಲಿ ಪಿರಿಯರು
ಇಂಬರಿಯದೆ ಬಂದಡವರಿಗಿಕ್ಕುವ ಮನುಜಂ
ಅಂಬುಜನಾಭಗೆ ಬ್ರಹ್ಮಗೆ
ಶಂಭುವಿನಿಂದಧಿಕನಹನು [ಕನ್ನಡ ಜಾಣಾ] ೩೧೨
(ನೀತಿ ಗ್ರಂಥ ಪು. ೧೭)

ಪಂಚಮಹಾಪಾತಕಮಂ
[3]ವಂಚನೆಯಂ[3] ಪಾಪದೋಷಮಂ ಕೊಲೆ ಹೊಲೆಯಂ
ಸಂಚಲಿಸದ ಬ್ರಹ್ಮತಿಯಂ
ಹಂಚಂಹರಿಮಾಳ್ಪುವನ್ನದಾನವೆ ಸಫಲಂ ೩೧೩
(ನೀತಿ ಗ್ರಂಥ ಪು. ೧೭)

ಅನುಜರ ಮಿತ್ರರ ಸುಜನರ
ತನಯರ ತನ್ನವರ ನೆಂಟರಿಷ್ಟರ ಗುಣಿಗಳ
ಮುನಿಗಳನುತ್ತಮ ಪಿರಿಯರ
ವಿನಯದಿ ಸಮಪಂತಿಯೂಟದವರ್ಗೆಣೆಯುಂಟೇ ೩೧೪
(ನೀತಿಗ್ರಂಥ ಪು. ೧೮)

---

1 .... (ಕ) 2 ಸುವ ಬೇಟಂ ಸಿರಿ ಧನ ಲಚ್ಚಿಗಳ ಕೇಡು (ಕ) 3 ವರನೆಮ್ಮ (ಗ)

ಎಡೆಮಾಡೆಂಬುದು ತನ್ನಯ
ಗಡಣದಲೆಡಬಲದಲುಳ್ಳ[1]ರುಂ[1]ಬರೆ ಮತ್ತಾ
ತುಡುಗುಣಿಯಂದದಿ ತಿಂಬರೆ
ಯಡಿಯೆಂಬಾ ನುಡಿಯದೇಕೆ [ಕನ್ನಡ ಜಾಣಾ] ೩೧೫
(ನೀತಿ ಗ್ರಂಥ ಪು. ೧೮)

ಹಪ್ಪಳ ಸಂಡಗೆ ಶಾಖಂ
ತುಪ್ಪಂ ಸಣ್ಣಕ್ಕಿಯಶನ ತೋವೆ ಪಳದ್ಯಂ
ಉಪ್ಪಿನಕಾಯ್ಗಳೆ ಮೊಸರುಂ
ಚಪ್ಪರಿದುಂಬವನೆ ದೇವ [ಕನ್ನಡ ಜಾಣಾ] ೩೧೬

ಹೂರಿಗೆ ಘಾರಿಗೆ[2]ಯೊಡೆಯುಂ
ಣ್ಬೋ[2]ರಿಗೆ ಪರಮಾನ್ನವೆಸೆವ ಭಕ್ಷ್ಯಫಲಂ ಘೃತ
ಕ್ಷೀರವೆರಸೊಲಿದು ಪಂತಿಯೊ
ಳಾರೋಗಿಸುವನೆ ದೇ[3]ವಂ [ಕನ್ನಡ ಜಾಣಾ][3] ೩೧೭
(ನೀತಿ ಗ್ರಂಥ ಪು. ೧೯)

ಹಾಗಲ ಗುಳ್ಳಂ ಪಡಲಂ
ಕೊಗರಿ ಕೂಷ್ಮಾಂಡವವರೆ ಬದನೆಗಳಿಂ ಲೇ
ಸಾಗಿರೆ ಮಾಡಿದ ಸವಿ ಮೇ
ಲೋಗರವುಂಬವಗೆ ದೇವ [ಕನ್ನಡ ಜಾಣಾ] ೩೧೮

ಸೂಜಿ ಕವಲಾದ ತೆಱದಿಂ
ರಾಜಾರ್ಥಕೆ ಪಲಬರೊಡೆಯರಾಗಲ್ ಮತ್ತಾ
ತೇಜಿಷ್ಟರು ಘನವಾಗಲು ಆ
[4][ರಾಜ್ಯಂ ಕೆಟ್ಟುಂ ಕಡೆಯೊಳರಸನುಂ][4] ಕೆಡುಗುಂ ೩೧೯

ಭೀತನನಲಸಿದನಂ ಕಾ
ಯಾರ್ತುರನಂ ಪಸಿದನಂ ತೃಷಾಪೀಡಿತನಂ
ದ್ಯೂತ ಮೃಗವ್ಯಸನ ಜನೋ
ಪೇತನನಱ[5]ದೆಯ್ದಿ ಬಿನ್ನವಿಪ್ಪನೆ[5] ಗಾಂಪಂ ೩೨೦
(ಪಂಚತಂ–೮೫–೩೨ : ಸೂಕ್ತಿಸು. ೧೬–೩೦)

---

1 ವರುಂ (ಕ) 2 ಯೊಡೆಯುಂಣಾ (ಕ) ಯುಂಣ್ಬೊ (ಗ) 3 ವ .... (ಕ)
4 ರಾಜ್ಯಕೆಟ್ಟು ಕಡೆಯೊಳಸು (ಕ) 5 ಪಱದು ಬಿನ್ನವಿಪ್ಪಂ (ಗ)

ಹರುಷದನಂ ದರಹಾಸನ
ಸರಸನನತಿಶಯನ ವಿನಯ ವಿತರಣದೊಳ್
ಪೊರೆದನನಱಿದುಂ ಬಿನ್ನವಿಪಂಗೆ
ಡರೊಂದುಂಟೆ ಸುಕವಿಕರ್ಣಾಭರಣಾ (?) ೩.೨೧

ಕಂಡುದನು ನುಡಿಯಲಾಗದು
ಕಂಡಡೆ ಕಡೆಗಣಿಸಿ ಕಳೆದು ಪೆಱರವಗುಣಮಂ
ಕಂಡೆಸಗದವನೆ ಸದ್ಗುಣಿ
ಕಂಡರೆ ಕಾಣದವೊಲಿಪ್ಪನಾತನೆ ಚದುರಂ ೩.೨೨

ಕಾಣದು[1][ದಂ][1] ನುಡಿಯಲಾಗದು
ಕಾಣದುದಂ ಕಂಡೆನೆಂಬನಂತತಿಮೂರ್ಖಂ
ಗೋಣನರಿದಿಡುವನಾತಂ
ಮಾಣಂ ಮಾಯಾವಿ ಹುಸಿಗೆ ಮೂಲಸ್ತಂಭಂ ೩.೨೩

ನಾರಿ ಮನೆಕಳ್ಳಿಯಾದೊಡೆ
ಕೇರಿಯ ತಳವಾರ ಚೋರನಾದೊಡೆ ಮತ್ತಾ
ಬಾರಿಕ ಕೊಂಡೆಯನಾದೊಡೆ
ಊರೇಳಿಗೆಯಾಗಲಿಲ್ಲ [ಕನ್ನಡ ಜಾಣಾ] ೩.೨೪

ಹಾಳೂರಲಿರವು ಬಡತನ
ಸಾಲಂಬಟ್ಟೂಟ ತುಪ್ಪವಿಲ್ಲದ ಹಬ್ಬಂ
ವೀಳೆಯವಿಲ್ಲದ ಮೊಗಮುಂ
ಬಾಳೇಂ ಪ್ರತ್ಯಕ್ಷ ನರಕ [ಕನ್ನಡ ಜಾಣಾ] ೩.೨೫

ವೀಳಯಮೋ ಮುಖಲಕ್ಷ್ಮಿಯ
ಪಾಳಯಮೋ ಜಾಡ್ಯವೃತ್ತಿಯಂ ಚಾಳಿಸುತಿಹ
ಚಾಳಯಮೋ ರತಿಕೇಳಿಯ
ವೀಳಯಮೋ ಸುರರಿಗುಂಟೆಯಾ ತಾಂಬೂಲಂ ೩.೨೬

ಸುತರಿಲ್ಲದ ಧನ ಶೂನ್ಯಂ
ಅತಿಪ್ರಿಯದ ಬಂಧುವಿಲ್ಲದಾ ಪುರಶೂನ್ಯಂ

1 ದನು (ಕ)

ಸತಿಯಿಲ್ಲದ ಗೃಹ ಶೂನ್ಯಂ
ಅತಿಮೂರ್ಖನ ಹೃದಯ ಶೂನ್ಯ [ಕನ್ನಡ ಜಾಣಾ] ೩.೨೭

ಧಣಿಯಿಲ್ಲದ ಧರೆ ರೋಗಂ
ಅಣಿಯರದಿಂ ಮಾಳ್ಪ ವಿನಯವೆಂಬುದು ಜಗಮಂ
ಗುಣ ದಯೆವಿಲ್ಲದುದೆ ಹಗೆ
ಮಣಿದಗೆ ಮಚ್ಚರಿಸುತಿಹುದೆ ಕುಂಭಿನಿನರಕಂ ೩.೨೮

ಮಾತುಗಳನಱಿಯದಾತನ
ಮಾತುಗಳವು ಮಾತೇ ನುಡಿವ ಸಮಯಕ್ಕೊಂದುಂ
ಮಾತುಗಳನಱಿದು ನುಡಿವನ
ಮಾತು ಜಗನ್ಮಾತೆಯಲ್ಲೆ [ಕನ್ನಡ ಜಾಣಾ] ೩.೨೯

ಕಟಕಿಯೆಂ ನುಡಿವನ ಮಾತುಂ
ಕುಟಿಲವ ಮಾಡುವಳ ಬೇಟ ಹಾವಿನ ಕೂಟಂ
ಆಟವಮಟಿಗರೊಡನೆಯಾಟಂ
ಡಿಟದಿಂದಡಸಿರ್ದ ಕೇಡು [ಕನ್ನಡ ಜಾಣಾ] ೩.೩೦

ಸೈರಣೆಯೆಂಬುದು ಪೈಸಿರಿ
ಸೈರಣೆ ಜಪತಪವು ದಾನಧರ್ಮಂ ಮತ್ತಾ
ಸೈರಣೆ ಶಾಶ್ವತ ಸುಖಮುಂ
ಸೈರಣೆ ಸರ್ವರ್ಗೆ ಹಿತವು [ಕನ್ನಡ ಜಾಣಾ] ೩.೩೧

ಸೈರಿಸಿ ಕಾರ್ಯವ ಕೊಂಬುದು
ವೈರಿಯ ಮನದಿಚ್ಛೆಯಱಿದು ನಡೆವುದು ಮತ್ತಾ
ಸೈರಣೆಗಳಿಲ್ಲದಾ ಗೃಹ
ವೈರಿಗೆ ಜಯ ತನಗೆ ಹಾನಿ [ಕನ್ನಡ ಜಾಣಾ] ೩.೩೨

ಸತ್ಯವು ಗುರು ಸತ್ಯವು ತಪ
ಸತ್ಯವು ಸಾಮರ್ಥ್ಯ ಸತ್ಯ ಶೌಚವು ಸಹಜಂ
ಸತ್ಯವು ಭೂಷಣ ಭೋಗಂ
ಸತ್ಯವೆ ಗುರು ಮೋಕ್ಷ ಬಂಧು ದೈವಮಂದಲ್ತೇ ೩.೩೩

ಉಪಕಾರವ ಮಾಡುವಡಂ
ಕುಪಿತಾತ್ಮರ್ಗೊಲಿದು ಮಾಡಲಾಗದು ಮಾಡ

ಲ್ಕುಪಕಾರಮಕ್ಕುಮದಱಿಂ
ದುಪಕಾರವ ಮಾಳ್ಪುದೈಸೆ ಸತ್ಪುರುಷರ್ಗಂ ೩.೩.೪

ಗುಣಿಯೆ ಗುಣಾವಳಿಯಂ ಸ
ದ್ಗುಣಿಗಳು ನೆಱೆ ಬಲ್ಲರಲ್ಲದವಗುಣಿಯಱಿಯಂ
ಗುಣಮುಳ್ಳ ಪುಷ್ಪವನವಂ
ನೊಣ ಬಲ್ಲುದೆಯಳಿಯ ತೆಱದಿ [ಚೂಡಾರತ್ನಾ] ೩.೩.೫

ಗುಣವಱಿಯದ ಚಾತುರ್ಯದ
ಕಣೆಯಱಿಯದ ತಮಗೆ ಹಿತವರೆಂಬುದನಱಿಯದ
ಬಣಗುಗಳೊಡನಾಟಂ ಸ
ದ್ಗುಣಿಗಳಿಗದು ಕಾಳಕೂಟ [ಚೂಡಾರತ್ನಾ] ೩.೩.೬

ಗುಣಿಯಂ ಕಂಡಡೆ ಸೈರಿಸ
ಗುಣಹೀನಂ ಶುನಕ ಚಂದ್ರನಂ ಕಾಣಲೊಡಂ
[1]ಮುನಿಗು[1] ಗುಣಿ ಮುನಿಯಲರಿಯಂ
ಗುಣಿಗಂ ಚಂದ್ರಂಗೆ ಬೆಳಗುತಿಪ್ಪುದೆ ಸಹಜಂ ೩.೩.೭

ಸರಿಯಲ್ಲದವರು ನುಡಿದರೆ
ತರಲಾಗದು ಮನಕೆ ಮುನಿಸದೆಂತೆನೆ ಪೇಳ್ವೆಂ
ಕರಿಗಳ ಘರ್ಜನೆಗಲ್ಲದೆ
ನಿರದೂಳುವ ನಾಯ ಧ್ವನಿಗೆ ಪಾಯ್ವುದೆ ಸಿಂಹಂ ೩.೩.೮

ಚಂ॥ ಅಱಿಯದು ಕಪ್ಪೆ ಸಾಗರವನಂಬುಧಿಗಂತದು ಕುಂದೆ ಗಂಗೆ ಕಂ
ಡಱಿಯದು ಚಂಡರೋಚಿಯನಿಸಂಗದು ಭಂಗಮೆ ಕಾಗೆ ಕಂ
ಡಱಿಯದು ಚಂದ್ರನಂ ಶಶಿಗೆ ಹೀನಮೆ ಸಜ್ಜನರೊಳ್ಳನಿಂ
ತಱಿಯದೆ [2]ದುರ್ಜನಂ ನಡೆಯೆ[2] ಕಷ್ಟತೆ ಪೊರ್ದುವುದೇ ನಿರಂತರಂ ೩.೩.೯
(ಧರ್ಮಾಮೃ : ೧–೧೧೭)

ಮ॥ ಕರಿಯಂ ಸೂಕರಿ ಸಿಂಹಮಂ ಶುನಕನಾ ಭೇರುಂಡನಂ ಪರ್ದು ಮ
ತ್ತುರಗಾಧೀಶನನೊಳ್ಳೆ ಕಾಗೆ ಪಿಕನಂ ಕೆಂಬೂತ ಮಯೂರನಂ
ಹರಿಯಂ ಕತ್ತೆ ಮರಾಳನಂ ಬಕನು ಕೈಲಾಸಾದ್ರಿಯಂ ಕಪ್ಪೆ ಕ
ಪ್ಪುರಮಂ ಸುಣ್ಣವಲಕ್ಕು ಮೆಚ್ಚದೊಡದೇಂ ಭಂಗಂಗಳೇ ಧಾತ್ರಿಯೊಳ್ ೩.೪೦

---

1 ಗುಣಿಗೆ (ಕ) 2 ದೂರ್ತನಿಂ ಪಱಿಯೆ (ಗ)

ಪುಲಿ ಪದುಗೆ ಪುಲ್ಲೆ ಹಾಜಿಲು
ಪುಲಿಗಾದಾ ಕೋಟಿತೆಯೇನು ಕಾರ್ಯಾಂತರದೊಳ್
ಗೆಲುವವನೆ ನೋಡಿಕೊಂಬುದು
ಚದುರಂ ಸಲೆ ಸೋತಡೇನು [ಚೂಡಾರತ್ನಾ] ೩೪೧

ಮುತ್ತಬ್ಬೆಗೇಕೆ ಮೋಹನ
ಪೊತ್ತೊಯ್ವರಿಗೇಕೆ ಪರಿದಿಳೆ ಬೆಳ್ಗೊಡೆ (?)
ತೊತ್ತಿಂಗೆ ಹಾಸುಮಂಚಂ
ಕತ್ತೆಗೆ ವೈಹಾಳಿಯೇಕೆ [ಚೂಡಾರತ್ನಾ] ೩೪೨

ನೀರಡಗುಂ ನೆಲನಡಗುಂ
ಕ್ಷೀರರಸಂ ಧಾನ್ಯವಡಗು ಪಣ್ ಫಲವಡಗುಂ
ನಾರಿಯುಡಗವಿಳವಡಗುಂ
ಆರೋಗಿಪದಡಗು ದೇಹ ಮುನ್ನವೆಯುಡೆಗುಂ ೩೪೩

ಹರಿ ಹದ್ದಂ ಹರನೆತ್ತಂ
ಸರಸಿಜಭವನಂಚೆಯುಂ ಕುಮಾರಂ ನವಿಲಂ
ಪರಿತುಂಭರನಿಲಿಯನೇಜಿಲು.
ಅರಸಂಗೆ ತಾನೆ ಕುದುರೆ [ಚೂಡಾರತ್ನಾ] ೩೪೪

ಸುಂಕಿಗಗೆ ಜೂಜು ಸುರಗಿಯು
ಅಂಕದವಂಗರಸು ಸೂಳೆಯುತಿಬುಡವಂಗಂ
ಸಂಕಿಸದೆ ಕಡನ ಕೊಟ್ಟಡೆ
ಭೋಂಕನೆ ಕೇಡಾಗದಿಹುದೆ [ಚೂಡಾರತ್ನಾ] ೩೪೫

ಬೋಳಿಗೆ ಬೈತಲೆ ಸಂತೆಯು
ಮಾನಸಿಕೆ ಬೇಡುವರ್ಗಭಿಮಾನಂ
ಲಾಳಿತೆ ನಂಬು ಭಿಕ್ಷದ
ಕೊಳಿಂಗದ್ವಣಿಗೆಯೇಕೆ [ಚೂಡಾರತ್ನಾ] (?) ೩೪೬

ದೇಶಾಧಿಪತಿಗೆಯಾ ಹರ
ಲೇಸಾಗಿಯೆ ಸೊಲ್ಲಗಣ್ಮ [1][ಯೆರೆಯುವ][1] ತುಪ್ಪಂ

---

1 ಯರವ (ಕ)

ಹಾಸಿನೊಳರ್ಥಂ ತನ್ನದು
ಈಸುಂ ಪೆಱರೊಡವೆಯಲ್ತೆ [ಚೂಡಾರತ್ನಾ] ೩೪೭

ಅರಿವಶ್ಯಂ ನಿಶ್ಯಂಕತೆ
ಗುರುವಶ್ಯಂ ಭಕ್ತಿ ಲೋಕವಶ್ಯಂ ತ್ಯಾಗಂ
ಪರಿಣಾಮದಾತ್ಮವಶ್ಯಂ
ಮನದ ಬಲ್ಪು (?) ೩೪೮

ರತಿಸುಖದ ಕಡೆಗೆ ಮೋಹಿಪ
ಸತಿಯದು ಲಾವಣ್ಯಮುಂಡು ದಣಿದ ಬಳಿಕ್ಕಂ
ದತಿರುಚಿಪಡಿಸುವ್ರದೂಟಂ
ನುತರಂ ನುತಿಸಲ್ಕೆ ಬಲ್ಲಡಾಕನೆ ಪ್ರವ್ರಡಂ ೩೪೯

ಆಲಸ್ಯನುಮವಿವೇಕಿಯು
ಸ್ತ್ರೀಲೋಲನುಮಧಿಕಲೋಭಿಯುಂ ನಿರ್ದಯನುಂ
ನಾಲಗೆಗೆ ಸೋಲ್ವ ನರನುಂ
ಪಾಲಿಸಲಾರ್ತಪನೆ ಜೈನಮತಮಂ ಹಿತಮಂ ೩೫೦

ಕೋಮಟಿಗನ ವಿಶ್ವಾಸಂ
ಕಾಮಿನಿಯರು ನುಡಿದ ನುಡಿಯು ಕನಸಿನ ಸಿರಿಯುಂ
ಕಾಮುಕನ ಲಜ್ಜೆ ವೈರಿಯ
ಪ್ರೇಮವ ನಿಜವೆಂದು ನಂಬಲಾಗದು ಚದುರಂ ೩೫೧

ಅನುಪಮ ಗುಣ[1]ಗಣಯುಕ್ತೆಯು[1]
ನನುಕೂಲೆಯನಧಿಕ ಪುಣ್ಯಲಕ್ಷ[2]ಣೆ[2]ಯುಂ ಮಾ
ನಿನಿಯುಂ ಸುರೂಪ[3]ವತಿ[3]ಯುಂ
ಜನಪಂ [4]ಮಾಟ್ಕುಂ ಕುಲಾಂಗಿಯುಂ ನಿಶ್ಚಯದಿಂ[4] ೩೫೨

(ಮಂದತಿ. ೬-೫೨ : ಸೂಕ್ತಿಸು. ೮–೧೧೩)

ಅನುಪಮಂಪವರ್ಗಳ ಕಾಮಂ
ಮನ[5]ಸಿಜ[5]ಸುಖಮಿಲ್ಲ ಸೆಜ[5]ಯೊಳಿರ್ಪುದಜ[5]ಂದಾ

1 ಯುಕ್ತೆಯು ತಾ (ಗ) 2 ಯುತೆ (ಕ) 3 ಯುತೆ (ಕ) 4 ಮಾಳ್ಕೆಂದುಮಾ ಕುಲಾಂಗಿಯು ಸತಿ ಕೇಳ್ (ಗ) 5 ಕೆ ,ಕ)

ಪನಿತೆಯರಿನಪಾಯೆಂಗ[1]ಳ
ನಿನಿತುಮನ[1]ಱಿದಾತ್ಮಪಂತನಪ್ಪುದು [2]ಚದುರಂ[2] ೩೫೩
(ಮದತಿ ೬-೫೬ : ಸೂಕ್ತಿಸು. ೮-೧೧೫)

ಮಜ್ಜನದಡಪದ ಕರಗದ
ಸಳ್ಳೆಯ ಬಾಣ[3]ಸದ ಬೆಸ[3]ನುಮಂ ಕೋಶಮುಮಂ
[4]ಬೆಜ್ಜತನದೆಡೆಯು[4]ಮಂ ಪೇಱ
ತುಜ್ಜಗಮಂ ಕೊರ್ತು ಮಧುಗೆ ಕೊಟ್ಟಂ ಕೆಟ್ಟಂ ೩೫೪
(ಮದತಿ ೬-೫೭ : ಸೂಕ್ತಿಸು ೮-೧೧೬)

ಒಲಪೆಂದುಂ ನಿಲಲರಿಯದು
ಕೆಲವು ದಿನಂ ನದೆಗುಮದಱಿನೊಲ್ದಾಗಳ್ ತಾಂ
ಲಲನೆಗೆ [5]ಪುರುವೃದ್ಧಿಯುಮಂ[5]
[6]ಪಲವುಂ ಪ್ರಿಯಮುಮನಿತ್ತಡಮ[6] ಪಗೆಯಲ್ಕೇ ೩೫೫
(ಮದತಿ. ೬-೫೯ : ಸೂಕ್ತಿಸು. ೮-೧೧೭)

ಪಲತೆಱದ ತೊಡುಗೆ ಬಿಡದಂ
ಬುಲಮೊಳ್ಗಸುಗಳನೆ[7]ಯ್ದೆ[7] ಸಲಿಸುಗೆ ಕೊರ್ತಂ
ತಲಸದೆ [8]ಸಂಭೋಗ[8]ದೊಳಂ
ಪಲವುಂ ಬಿನದದೊಳವರ್ಗೆ ಕಳಿಪುದು ಪೊತ್ತಂ ೩೫೬

(ಮದತಿ. ೬-೬೧ : ಸೂಕ್ತಿಸು. ೧-೧೧೯)

ಅವರ್ಗೆ ಬಹುವ್ಯಾಪಾರ[9]ಮು
ಮ[9]ವರ್ಗೆ ಪರಿಸ್ಪಂದ[10]ಮುಮಂ ಮಾಡಲು[10] ಬೇ
ಡವರಂ ಸಂಕುಚಿತಪದೆ ಸಂ
[11]ತವಿಡಿಸಿ ಸಂತುಷ್ಟರಾಗೆ[11] ಮಾಟ್ಪುದು [12]ಚದುರಂ[12] ೩೫೭
(ಮದತಿ. ೬-೬೩ : ಸೂಕ್ತಿಸು. ೮-೧೨೦)

---

1 ಳ್ ಜನಿಯಿಂಕೆಯಮ (ಗ) 2 ಭೂಪಂ (ಕ) 3 ಸಿನ ಬೆಸನ (ಕ) 4 ಸಜ್ಜನದೆರೆಯ (ಗ) 5 ಪುರೋವೃದ್ಧಿಯ (ಗ) 6 ಪಲವಾಂಯನಮಿತ್ತರದಾಪೆ ತಾಂ (ಗ) 7 ಟ್ಟಿ (ಕ) 8 ಸಭಾಂಗಣ (ಕ) 9 ಮುಮಾತ್ತೆ (ಕ) 10 ಪಮಂ ಪರಿಗ್ರಹಮಂ (ಗ) 11 ತುಷ್ಟವಡಿಸಿ (ಕ) 12 ನರಪಂ (ಗ)

ಮನೆವಾರ್ತೆಯು [1]ಕೋಟಲೆಯೊಳ್[1]
[2]ಜನಪದ ಗಮನಂಗಳೆಡೆಯೊಳಂಗಜರಾಗಂ[2]
[3]ಜನಿಯಿಕುವೆಂದ.[3] ಕೆಲರ್ ಸ
ಜ್ಜನದಿಂ ಮನೆವಾರ್ತೆಗೆಯ್ಸಲೊಲ್ಲರ್ ಚದುರರ್ ೩.೫೮
(ಸೂಕ್ತಿಸು. ೮-೯೫)

ಕಡುಗೂರ್ತೊರ್ಮೆಯೆ ಮೊಕ್ಕ[4]ಳಂ ಕ[4]ನಕಮಂ ತಾನೀಯಲಾಗಳ್ ಕರಂ
[5]ಕಡುಗುತ್ತುತ್ತಮ[5] ವಸ್ತ್ರಮಂ ಘುಸೃಣಮಂ ಕಸ್ತೂರಿಯಂ ಪುಷ್ಪಮಂ
ಮುಡಿಯಂ ಚಂದನಮಂ ಫಲಾವಳಿಗಳಂ ಕರ್ಪೂರಮಂ ನಿಚ್ಚಲುಂ
ಪಡೆಮಾತೇಂ ಪರಿರ[6]ಕ್ಷೆ ಮಾಡಿ[6] ವನಿತಾಸಂಗಕ್ಕೆ ಭೂಪಾಲಕಂ ೩.೫೯
(ಮದತಿ. ೬-೬ : ಸೂಕ್ತಿಸು. ೮-೧೧೮)

ನಗೆಯಿಂ ನೋಟದಿನೊಳ್ಪಿನಿಂ ವಿಭವದಿಂ ಸೌಂದರ್ಯದಿಂ ಧೈರ್ಯದಿಂ
ಬಗೆಯಿಂ [7]ಬ[7]ಲ್ಪಿನಿನಿಂ[8]ಬುಗೆ[8]ಯ್ವ ರತಿಯಿಂ ಚಾತುರ್ಯದಿಂ ಶೌರ್ಯದಿಂ
ಮಿಗಿಲೀತಂ ಪೆಜರ್ಗೆಂದು ತನ್ನ ವಧುವಂ ನಚ್ಚಿರ್ಪಿನಂ ಮಾಳ್ಕೆ ಭಾ
ಷೆಗಳಿಂ ಪ್ರೇರಕದಿಂ ಕುಲಾಂಗನೆಗೆ ಹೃತ್ಸಂತೋಷಮಂ [9]ಸದ್ಬುಧರ್[9] ೩.೬೦
(ಮದತಿ. ೬-೪೯ : ಸೂಕ್ತಿಸು. ೮-೧೧೨)

ಗುರುಗಳ ನಂಟರ ಕೆಳೆಯರ
ಪೊರೆವಾಳ್ವನ ಮೆಚ್ಚದವರ ಸವತಿಯ ಕೆಲದೊಳ್
ಪರಿಭವಿಸಲು [10]ನೆರೆವತ್ತಲು[10]
ಕರಮಳಲಿಸಲಾಗದಾತ್ಮ ಸತಿಯಂ [11]ಪುರುಷಂ[11] ೩.೬೧
(ಮದತಿ. ೬-೧೩ : ಸೂಕ್ತಿಸು. ೮-೯೬)

[12]ಪತಿಭಕ್ತೆಯು[12] ಧರ್ಮಜ್ಞೆಯು
[13]ಮತಿವಂತೆಯು[13] ಸಂದ ಶೌಚವಂತೆಯು [14]ನ[14]ತ್ರಾ

---

1 ಕೋಟೆಯೊಳಂ (ಗ) 2 ಜನಪತಿಯೆನು ಭವಣೆಯಿಂದಮಂಗಜರಾಜಂ (ಗ) ಜನಿಯಿಸದೆಂದು (ಗ) 4 ಳಕ್ಕ (ಕ) 5 ಕಡುಗತ್ಯುನ್ನತ (ಗ) 6 ಕ್ಷಣಮಾಗಿ (ಕ) ಮೊ (ಗ) 8 ವುಕೆ (ಕ) 9 ಮಾಡುಗುಂ (ಗ) 10 ನರನೆತ್ತಲು (ಗ) 11 ವಧುವಂ ಪತಿಯುಂ (ಗ) 12 ಮತಿವಂತೆಯು (ಗ) 13 ಪತಿಭಕ್ತೆಯು (ಗ) 14 ಸ (ಗ)

ನಿಶಮಚನೆಯು ಕಥೆಯನೆ ಪೇ
ಳ್ಗತಿಶಯದಿಂ ತನ್ನ [1]ಸತಿಗೆ ಪಂಡಿತನಪ್ಪಂ[1] ೩೬೨
(ಸೂಕ್ತಿಸು. ೮-೯೯)

ಸುದತಿಯರಾರುಂ ಸಂಸ
ರ್ಗದ ಕತದಿಂ ದೋಷಮಂ ಗುಣಂಗ[2]ಳುಮಂ ಮಾ
ಣದ[2] ಕೈಕೊಳ್ವುದರಿಂದಂ
[3]ಸುದತಿಗೆ[3] ಯೋಚಿಸುಗೆ ನೀತಿಯುಂ ಧರ್ಮಮುಮಂ ೩೬೩
(ಮದತಿ, ೫-೧೪ : ಸೂಕ್ತಿಸು. ೮-೯೭)

ಲತೆ ಮೊದಲಾಗಿ ಸವಿಷಾವ
ಸ್ಥಿತಿ ವೃಕ್ಷಮದೆಂತುಟಾದಡಂ ಪೆ[4]ರ್ಚು[4]ಗುಮಾ
ಸ್ಥಿತಿಯುಂ ಸತಿಸಂ[5]ಸರ್ಗದ[5]
ಕತದಿಂ [6]ಕೆಟ್ಟಾರೋಳಾದೊಡಂ[6] ಪುದುವಾಳ್ಗುಂ ೩೬೪
(ಮದತಿ. ೬-೧೫ : ಸೂಕ್ತಿಸು. ೮-೯೮)

ಮನುಮತಮಂ ವೇದಾಂತಾ
ದ್ಯನೇಕ ಧರ್ಮಾಗ[7]ಮಂಗಳಂ ಕಲ್ತಿರ್ದಾ[7]
ಮುನಿಪರುಮಳಿಪುವರೆಂದೊಡೆ
ವನಿತೆಯರಳಿಪುವುದಿದೊಂದು ಚೋದ್ಯಮೆ ಜಗದೊಳ್ ೩೬೫
(ಮದತಿ. ೬-೨೩ : ಸೂಕ್ತಿಸು. ೮-೧೦೩)

ನೆರೆಯಲೆಡೆ ಪೊಟ್ಟು ದೂತರ್
ದೊರೆಕೊಳ್ಳದೊಡಂಗನಾಜನಂ ಶುಚಿಯಲ್ಲದೆ
ನೆರೆಯಲೆಡೆ ಪೊತ್ತು ದೂತರ್
ದೊರೆಕೊಂಡೊಡೆ ಶುಚಿಗಳಂಟೆ ಪೆಂಡಿರ್ ಜಗದೊಳ್ ೩೬೬
(ಸೂಕ್ತಿಸು. ೮-೧೨೫)

---

1 ಪಥಂಗೆ ಘಟಿಕುಚೆಯುಂಗಳಿ (ಗ) 2 ಳೆ ಮುನ್ನೋಚನೆ (ಗ) 3 ಮೊದಲೊಳಂ (ಗ) 4 ತ್ತು (ಗ) 5 ಗತ್ಯದ (ಗ) 6 ಕೊಟ್ಟಾರೋಳಂ (ಕ) 7 ಮುಮಂ ಕಲಿತಾರ್ದಾ (ಕ)

ಚಂ॥ ಗೊರವಿತಿ ತೊತ್ತು ರಂಡೆ ರಜಕಾಂಗನೆ ನೀರೆಱೆವಾಕೆ ಚಿತ್ರಮಂ
ಬರೆವವಳೊತ್ತೆಗೊಳ್ಪಳಿಲೆ ಮಾಱುವ ಜತ್ತುಕಿ ಶೂಲಗಿತ್ತಿ ಗೋ
ವರ ವಧು ಮಾಲೆಗಾರ್ತಿ ಮುಂದುಗುಂಟಣಿವೇರಡುಗಿತ್ತಿಯೆಂಬ ಪೆಂ
ಡಿರ ನೆರೆಗೊಂಡೊಡೆಂದಱಿಗೆ ಸಜ್ಜನವೆಂಡತಿ ಕೆಟ್ಟಳೆಂಬುದಂ ೩೬೭
(ಸೂಕ್ತಿಸು. ೮-೧೦೭)

ರತಿಹೀನ ಹೆಳವ ಗುಜ್ಜಂ
ಮತಿವಂತಂ [1]ವೃದ್ಧ ನೋಡೆ ಕೃಶನಂ ಹಿತನಂ[1]
ಸತಿಯಂ ಕಾಯಲ್ ತಕ್ಕಂ
ರತಿರಾಗಿಗಳುಳಿದ ಕಾಪಿನೊಳ್ ನಿಂದ ಪತೀ ೩೬೮
(ಮಂದತಿ, ೬–೩೨, ಸೂಕ್ತಿಸು, ೮–೧೧೯)

ಚೆನ್ನಿಗನಂ ಜವನಿಗನಂ
ನನ್ನಿಗನಂ ಪಾಣ್ಬನಂ ಕರಂ ಸೊಬಗನುಮಂ
ತನ್ನ ಸತಿಯರ್ಗೆ ಕಾಪಿಡೆ
ನಿರ್ಣಯದಿಂ ತನ್ನ ಮನೆಯೊಳಿಟ್ಟಂ ಕಿಚ್ಚಂ ೩೬೯

ಚಂ॥ ಪರಪರಿವಾದಮಂ ನೆಗಳ್ವುದೆ ಜಪಮುನ್ನಮನಪ್ರಸೂನಮಂ (?)
ಕೊರಗಿಪುದೇ ತಪಂ ಪೆಱರ ಜೀವಿತಮಂ ಪಱಿದಿಕ್ಕುವಂದಮೋ
ಪರತರ ಶೀಲಮಾದರಿಸಿ ಲೋಗರ ಮರ್ಮಮಂ ಭೇದಿಪಂ (?)
ದಿರವೆ ಪೊದಳ್ದ ಜಾನಮೆಲೆ ದುರ್ಜನ ತಾಪಸನೇಂ ಕೃತಾರ್ಥನೋ ೩೭೦

ಜೀವಿಸುಗೆ ವಜ್ರಲೋಭಿಯು
ಗಾವಧಿವರಮಲ್ಲದಂದು ಧಾತ್ರನ ಬಲದಿಂ
ಪಾಪಾಗಿ ಪುಟ್ಟಿ ಧನಮಂ
ಕಾವಂತುಟೆ ಲೋಕಮೆಲ್ಲಮಂ ಮೆಲ್ಲದಿರಂ ೩೭೧
(ಲೀಲಾ, ೧–೪೪)

ಶಾ॥ ಇಂದ್ರತ್ವಂ ಬಲದೇವರಾದಿ ಖಚರೇಂದ್ರೋತ್ಪತ್ತಿ ಷಟ್ಖಂಡ ಭೂ
ಗೀಂ[2]ದ್ರತ್ವಂ ನಿರುಜತ್ವಮಂತೆ ವಿಜಿಗೀಷುತ್ವಂ ತಪೋಯೋಗಿ[2]ಯೋ

---

1 ನಾಡೆ ವೃದ್ಧಕೃಶಗರ್ಹಿತನಂ (ಗ) 2 ಯೂಪೆಂ (ಕ)

ದೇಂದ್ರರ್ತ್ನಂ ಬಹುಶಾಸ್ತ್ರಪಾರಗಗುಣಾಂ ತ್ರೈಲೋಕ್ಯ ಸಂಪೂಜ್ಯ ಜೈ
ನೇಂದ್ರಶ್ರೀಪದಮೆಂಬಿನಿತ್ತು[1]ಮೊಗೆಗುಂ ಸದ್ಧರ್ಮದಿಂ ಜೀವನೇ ೩.೭೨

(ಜೀವಸಂ. ೧೨-೧೨)

ಮ॥ ಕುಲಮುಂ ರೂಪಮುಮಾಯುಮಾರ್ಪು ಗುಣಮುಂ ಸೌಭಾಗ್ಯಮುಂ ಭಾಗ್ಯಮುಂ
ಬಲಮುಂ ತೇಜಮುಮಾಜ್ಞೆಯುಂ ವಿನಯಮುಂ ಚಾತುರ್ಯಮುಂ
ಶೌರ್ಯಮುಂ
ನೆಲೆಯುಂ ವಿದ್ಯೆಗಳುಂ ಪ್ರಭುತ್ವ ಗುಣಮುಂ ಸೌಂದರ್ಯಮುಂ ಧೈರ್ಯಮುಂ
ವಿಲಸದ್ಧರ್ಮದಿನಕ್ಕು[2]ಮೆಂದಱಿಪೆಯುಂ ಮಾಣ್ದಿರ್ಪುದೇ ಜೀವನೇ[3] ೩.೭೩

(ಜೀವಸಂ. ೧೨-೧೦)

ಚಂ॥ ಪಿರಿದುಪಕಾರಿಯಲ್ಲದರಿವಿಲ್ಲದ ಬೀದಿವಾತುಮಂ
ದೊರೆಯನೆ ಮಾಳ್ಪ ಯುಕ್ತಿಯಣಮಿಲ್ಲದಳುಕ್ತಿಯನಾಂಪತಪ್ಪೋದಿ ಕ
ಣ್ದೆರೆಯದ ಶೇಷಯುಕ್ತಿಗೆಣೆಗಾಣದೆ ಕೋಪಿಪ ಕೇಳ್ದು ಕೇಳ್ದು ಮ
ಚ್ಚರಿಸುವರಗ್ರದೊಳ್ ನುಡಿಯಬೇಡಲೆ ಭವ್ಯನೆ ಧರ್ಮಮಾರ್ಗಮಂ (?) ೩.೭೪

ಕೊಲ್ಲದ ಧರ್ಮವೆ ಧರ್ಮಂ
ಬಲ್ಲಿಹ ಪದಿನೆಂಟು ದೋಷವರ್ಜಿತನಾಪ್ತಂ
ಪುಲ್ಲಶರಂಗೊಳಗಾಗದ
ಯೆಲ್ಲಾ ಜೀವಪಕಾರಿ ಗುರುವೆಂದಱಿಯೈ (?) ೩.೭೫

ಉರಗನ ದಾಡೆಯೊಳಮೃತಮ
ನುರಿವಗ್ನಿಯೊಳಧಿಕ ಶೈತ್ಯಮಂ ಮೂರ್ಖಸಭಾಂ
ತರದೊಳ್ ವಿವೇಕಮಂ ಭವ
ಶರನಿಧಿಯೊಳ್ ಸಾರಸುಖಮನರಸಿದೊಡುಂಟೇ ೩.೭೬

(ವರ್ಧಪ್ರ ೧-೧೦೧)

ಉ॥ ಅಕ್ಕರವೋದದಂದು ಪಱಿಪಟ್ಟಿತು ಪಾರ್ವನ ನೀತಿ ಸೂಳೆಗಂ
ಮಕ್ಕಳು ಪುಟ್ಟಿದಂದೆ ಪಱಿಪಟ್ಟಿತು ಯವ್ವನದೇಳ್ಗೆಯಾಳ್ದನೊಳ್
ಕಕ್ಕಸ ಪುಟ್ಟಿದಂದು ಪಱಿಪಟ್ಟಿತು ಜೀವಿತದಾಸೆ ನಾರಿಯೊಳ್
ನಕ್ಕ ಮುನೀಶ್ವರಂಗೆ ಪಱಿಪಟ್ಟಿತು ಮೋಕ್ಷದ ಬಟ್ಟೆ [3]ನಿಶ್ಚಯಂ ೩.೭೭

---

1 ಮೆಳೆ (ಕ) 2 ಮೆಂದು ಬಗೆ ನೀಂ ಧರ್ಮಕ್ಕೆ ಗೆಂಟಿಪ್ಪುದೇ (ಗ) 3 ನಂಬುವಿ (ಕ)

ದಿನಕರಗೆ ಅರ್ಘ್ಯಮಂತ್ರವ
ನನುದಿನಮಿಾವಂತೆ ಚಂದ್ರಮಂಗಿತ್ತಪರೇ
ಮನುಜರು ತೀವ್ರರಿಗಲ್ಲದೆ
ವಿನಯರಿಗಿತ್ತಪರೆ ಸುಕವಿ ಸುಜನಮನೋಜಾ ೩೭೮

ನಂಬುವುದು ಪಸಿದ ಪುಲಿಯಂ
ನಂಬುವುದಾರ್ಭಟಿಸಿ ತಿಂಬ ಕಾಳೋರಗನಂ
ನಂಬುವುದು ಪೊಡೆವ ಸಿಡಿಲಂ
ನಂಬದಿರಾ ಸ್ತ್ರೀಯರೆಂಬ ಮಹಾಪಾತಕರಂ ೩೭೯

|| ವರ ತೀರ್ಥಂಗಳನಾವ ಸತ್ಪುರುಷರಂ ದೈವಜ್ಞರಂ ದೇವಮಂ
ದಿರಮಂ ಭೂಭುಜರಂ ವಿಶೇಷ ಪುರಮಂ ವಿದ್ವಾಂಸರಂ ವೀರರಂ
ಗುರುವಂ ಯೋಗಿಜನಂಗಳಂ ಗುಣಿಗಳಂ ಧರ್ಮಜ್ಞರಂ ಧಾತ್ರವಂ
ಪಿರಿದುಂ ಕಾಣಲಿವೇಳ್ಕುಮೆಂಬುದು ಪುರಾಣೋಕ್ತಂ ಧರಾಚಕ್ರದೊಳ್ ೩೮೦